ಪ್ರತಿಪದಾರ್ಥ - ತಾತ್ಪರ್ಯಸಹಿತಾ

# ವಾಯುಸ್ತುತಿಃ



ಉಡುಪಿ

ಪಾವಂಜೆ ಗುರುರಾವ್ ಅಂಡ್ ಸನ್ಸ್

10/9/21

ಶ್ರೀಃ

ಪ್ರತಿಪದಾರ್ಥ-ತಾತ್ಪರ್ಯಸಹಿತಾ

# ವಾಯುಸ್ತುತಿಃ

ನಖಸ್ತುತಿ-ಖಿಲವಾಯುಸ್ತುತಿಸಹಿತಾ

ಅನುವಾದಕ:

ದಿ। ಶ್ರೀ. ಬಿ. ಶ್ರೀನಿವಾಸ ಭಟ್ಟರು, ಸಾಹಿತ್ಯಶಿರೋಮಣಿ.



ಉಡುಪಿ

ಪಾವಂಜೆ ಗುರುರಾವ್ ಅಂಡ್ ಸನ್ಸ್

*Vāyustutih (Sārtha)*

ಐದನೆಯ ಅಚ್ಚು:
ಶಾ. ಶ ೧೮೯೪

ಪ್ರಕಾಶಕರು:
ಪಾವಂಜೆ ಗುರುರಾವ್ ಅಂಡ್ ಸನ್ಸ್
ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ
ಉಡುಪಿ

ಅಚ್ಚುಗಾರರು:
ಪಾವಂಜೆ ಗುರುರಾವ್ ಅಂಡ್ ಸನ್ಸ್
ಶ್ರೀಕೃಷ್ಣಮುದ್ರಣಾಲಯ
ಉಡುಪಿ



ಬೆಲೆ: ರೂ. 1.00
25

# ವಾಯುಸ್ತುತಿಪುರಶ್ಚರಣವಿಧಿಃ

## ೧ ಗುರುರಾಜೀಯಪುರಶ್ಚರಣಕ್ರಮಃ

ಸಂಕಲ್ಪ್ಯ 'ಪಾಂತ್ವಸ್ಮಾ'ನಿತಿ ಶ್ಲೋಕದ್ವಯಂಪಠನಂ, 'ಶ್ರೀಮದ್ವಿಷ್ಣ್ವ'ತ್ಯಾರಭ್ಯ 'ಸುಬ್ರಹ್ಮಣ್ಯಾ'ಂತಂ ಪಠನಂ, ಸ್ವಾಭೀಷ್ಟಶ್ಲೋಕಮಾರಭ್ಯ ಸುಬ್ರಹ್ಮಣ್ಯಾ'ಂತಂ ಪಠನಂ, ಪುನಃ 'ಶ್ರೀಮದ್ವಿಷ್ಣ್ವ'ತ್ಯಾರಭ್ಯ 'ಸುಬ್ರಹ್ಮಣ್ಯಾ'ಂತಂ ಪಠಿತ್ವಾ 'ಪಾಂತ್ವಸ್ಮಾ'ನಿತಿ ಶ್ಲೋಕದ್ವಯಂ ಪಠೇತ್ ॥

ಸಂಕಲ್ಪಾನಂತರ 'ಪಾಂತ್ವಸ್ಮಾನ್' ಈ ಎರಡು ಶ್ಲೋಕಗಳನ್ನು ಪಠನಮಾಡಬೇಕು. 'ಶ್ರೀಮದ್ವಿಷ್ಣ್ವಂಘ್ರಿ'ಇತ್ಯಾದಿ ವಾಯುಸ್ತುತಿಯನ್ನು 'ಸುಬ್ರಹ್ಮಣ್ಯಾಖ್ಯಸೂರೇಃ' ಎಂಬ ಶ್ಲೋಕಪರ್ಯಂತ ಹೇಳಿ, ವಾಯುಸ್ತುತಿಯ ಮಧ್ಯದಲ್ಲಿ ತನ್ನ ಅಭೀಷ್ಟವರಪ್ರದವಾದ ಶ್ಲೋಕವನ್ನು ಆರಂಭಿಸಿ. 'ಸುಬ್ರಹ್ಮಣ್ಯಾ'ಖ್ಯ ಎಂಬ ಅವಸಾನಪರ್ಯಂತ ಹೇಳಿ, ಪುನಃ 'ಶ್ರೀಮದ್ವಿಷ್ಣ'ವೆಂಬ ಪದ್ಯವನ್ನೇ ಆರಂಭಿಸಿ, 'ಸುಬ್ರಹ್ಮಣ್ಯಾಖ್ಯಸೂರೇಃ' ಎಂಬ ಪದ್ಯಾಂತದ ವರೆಗೆ ಹೇಳಿ, 'ಪಾಂತ್ವಸ್ಮಾನ್' ಇತ್ಯಾದಿ ಎರಡು ಶ್ಲೋಕಗಳನ್ನು ಹೇಳಿ ಸಮಾಪ್ತಿ ಮಾಡಿದರೆ ಒಂದಾವರ್ತಿ ಪುರಶ್ಚರಣವಾಯಿತು.

ಈ ರೀತಿ ಐದು ಸಾರಿ ಮಾಡಿದರೆ ಒಂದು ಪಂಚಕವೆಂದು ವ್ಯವಹಾರ. ಈ ಪಂಚಕವನ್ನು ಏಳು ದಿವಸ ಮಾಡಿದರೆ ಒಂದು ಸಪ್ತಕ. ಪ್ರತಿಯೊಂದು ಸಪ್ತಕಕ್ಕೂ ಹೋಮ ಮಾಡುವುದು ಆವಶ್ಯಕ.

## ೨ ವ್ಯಾಸರಾಯತೀರ್ಥೀಯಪುರಶ್ಚರಣಕ್ರಮಃ

ಸಂಕಲ್ಪ್ಯ 'ಪಾಂತ್ವಸ್ಮಾ'ನಿತಿ ಶ್ಲೋಕದ್ವಯಂಪಠನಂ. ಸ್ವಾಭೀಷ್ಟಶ್ಲೋಕಮಾರಭ್ಯ 'ಸುಬ್ರಹ್ಮಣ್ಯಾ'ಂತಂ ಪಠನಂ, 'ಶ್ರೀಮದ್ವಿಷ್ಣ್ವ'ತ್ಯಾರಭ್ಯ 'ಸುಬ್ರಹ್ಮಣ್ಯಾ'ಂತಂ ಪಠಿತ್ವಾ 'ಪಾಂತ್ವಸ್ಮಾ'ನಿತಿ ಶ್ಲೋಕದ್ವಯಂ ಪಠೇತ್ ॥

ಸಂಕಲ್ಪಾನಂತರ 'ಪಾಂತ್ವಸ್ಮಾ'ನಿತಿ ಎರಡು ಶ್ಲೋಕ ಪಠನ ಮಾಡುವುದು. ಸ್ವಾಭೀಷ್ಟವರಪ್ರದಶ್ಲೋಕವನ್ನು ಆರಂಭಿಸಿ, 'ಸುಬ್ರಹ್ಮಣ್ಯಾ'ಂತ ವಾಯುಸ್ತುತಿಯನ್ನು ಪಠಿಸಿ, ಪುನಃ 'ಶ್ರೀಮದ್ವಿಷ್ಣ್ವಂಘ್ರಿ' ಎಂಬ ಶ್ಲೋಕವನ್ನಾರಂಭಿಸಿ, 'ಸುಬ್ರಹ್ಮಣ್ಯಾ'ಂತ ಹೇಳಿ, 'ಪಾಂತ್ವಸ್ಮಾ'ನೆಂಬ ಎರಡು ಶ್ಲೋಕಗಳನ್ನು ಪಠನ ಮಾಡಿ ಸಮಾಪ್ತಿ ಮಾಡುವುದು. ಇದು ಒಂದಾವರ್ತಿ. ಪಂಚಕ ಸಪ್ತಕ ಕ್ರಮ ಪೂರ್ವದಂತೆಯೇ.

**ಹೋಮದ್ರವ್ಯಗಳು**:–ಹವಿಸ್ಸು, ತಿಲ (ಎಳ್ಳು), ನಾರಿಕೇಳ (ತೆಂಗಿನಕಾಯಿ), ಮಧು (ಜೇನುತುಪ್ಪ), ಗೋಘೃತ(ಆಕಳತುಪ್ಪ), ಕದಳೀಫಲ (ಬಾಳೆಹಣ್ಣು), ಇಕ್ಷುಂ (ಕಬ್ಬು), ಕ್ಷೀರ (ಹಸುವಿನ ಹಾಲು), ಮೋದಕ–ಇವುಗಳನ್ನು ಸರಿಯಾಗಿ ಬೆರಸಿ, ಒಂದು ಆಹುತಿಗೆ ಒಂದು ಮುಂಷ್ಟಿಗೆ ಕಡಿಮೆಯಾಗದಂತೆ ಹೋಮಿಸಬೇಕು.

ನಿತ್ಯ ಪಾರಾಯಣ ಮಾತ್ರ ಮಾಡುವವರೂ 'ಪಾಂತ್ವಸ್ಮಾನ್...... ॥ ಲಕ್ಷ್ಮೀಕಾಂತ......॥' ಈ ಎರಡು ಶ್ಲೋಕಗಳನ್ನು ಹೇಳಿ, ವಾಯುಸ್ತುತಿಯನ್ನು ಪಠಿಸಿ, ಕೊನೆಗೆ ಪುನಃ 'ಪಾಂತ್ವಸ್ಮಾನ್......' ಇತ್ಯಾದಿ ಎರಡು ಶ್ಲೋಕಗಳನ್ನು ಹೇಳಿ, ಸಮಾಪ್ತಿ ಮಾಡಬೇಕು.

---

ಶ್ರೀಃ



॥ ಶ್ರೀಪ್ರಾಣೇಶಾಯ ನಮಃ ॥

# ಶ್ರೀವಾಯುಸ್ತುತಿಃ

## ಅವತರಣಿಕೆ

ಶ್ರೀ ರೂಪ್ಯಪೀಠಪುರ (ಉಡುಪಿ)ದಲ್ಲಿ ಶ್ರೀಮನ್ಮಧ್ವಾಚಾರ್ಯರು ಶ್ರೀಕೃಷ್ಣನಿಗೆ ನೈವೇದ್ಯಸಮರ್ಪಣ ಮಾಡುತ್ತಿದ್ದವರು ಬಹಳ ಹೊತ್ತಾದರೂ ಘಂಟಾನಾದ ಮಾಡದಿರಲು, ದ್ವಾದಶಸ್ತೋತ್ರನಾಮಸಂಕೀರ್ತನ ಮಾಡುತ್ತಿದ್ದ ಶ್ರೀ ತ್ರಿವಿಕ್ರಮಪಂಡಿತಾಚಾರ್ಯರು–'ಇಂದೇನು ಇಷ್ಟು ಸಮಯ'ವೆಂದು ಬಾಗಿಲ ಸಂದಿನಲ್ಲಿ ಇಣಿಕಿ ನೋಡಿದರು. ಆಗ ಶ್ರೀಮದಾಚಾರ್ಯರು ಹನುಮಂತನಾಗಿ ಶ್ರೀರಾಮನನ್ನೂ, ಭೀಮನಾಗಿ ಶ್ರೀಕೃಷ್ಣನನ್ನೂ, ಮಧ್ವಾಚಾರ್ಯರಾಗಿ ಶ್ರೀ ವ್ಯಾಸರನ್ನೂ ಪೂಜಿಸುತ್ತಿರುವುದನ್ನು ಕಂಡು, ಶ್ರೀಮದಾಚಾರ್ಯರು ಶ್ರೀ ಮುಖ್ಯಪ್ರಾಣದೇವರ ಅವತಾರವೆಂದು ಪ್ರತ್ಯಕ್ಷ ತಿಳಿದು, ಹನುಮದ್ಭೀಮ ಮಧ್ವಾವತಾರಾತ್ಮಕ ವಾಯುಸ್ತುತಿಯನ್ನು ರಚಿಸಿ, ಶ್ರೀಮದಾಚಾರ್ಯರಿಗೆ ಸಮರ್ಪಿಸಿದರು. ಶ್ರೀಮದಾಚಾರ್ಯರು ಅವರ ಭಕ್ತಿ ಕಾರ್ಯಕ್ಕೆ ಸಂತುಷ್ಟರಾಗಿ ಅದರ ಪ್ರತಿಯೊಂದು ಶ್ಲೋಕಪಠನಪುರಶ್ಚರಣಾದಿಗಳಿಗೆ ಒಂದೊಂದು ಫಲವಾಗುವುದೆಂಬ ವರವನ್ನಿತ್ತು, ತನ್ನ ಸ್ತೋತ್ರಮಾತ್ರವಿರುವುದನ್ನು ಸಹಿಸದೆ, ಶ್ರೀನೃಸಿಂಹನಖಸ್ತುತಿರೂಪವಾದ ಶ್ಲೋಕವನ್ನು ತಾವು ರಚಿಸಿ, ಈ ವಾಯುಸ್ತುತಿಗೆ ಇದು ಮಂಗಳಾಚರಣವಾಗಿದ್ದು ಆದ್ಯಂತಗಳಲ್ಲಿ ಸಂಪುಟಾಕಾರವಾಗಿ ಪಠಿಸಿದರೆ ಸರ್ವಾಭೀಷ್ಟ ಲಭಿಸುವುದೆಂದು ಅನುಗ್ರಹಿಸಿದರೆಂಬುದಾಗಿ ಪ್ರಸಿದ್ಧಿಯಿದೆ. ಛಲಾರಿಟೀಕೆಯಲ್ಲಿ ಈ ಸಂದರ್ಭವು ಬದರೀಕ್ಷೇತ್ರದಲ್ಲಿಯೂ ಒಮ್ಮೆ ನಡೆದಿತ್ತೆಂದು ಬರೆದಿರುತ್ತಾರೆ.

## ವಾಯುಸ್ತುತಿಷಡಂಗಾದಿ

ಅಸ್ಯ ಶ್ರೀವಾಯುಸ್ತುತಿಮಹಾಮಂತ್ರಸ್ಯ ತ್ರಿವಿಕ್ರಮ ಋಷಿಃ । ಪ್ರಕೃತಿಶ್ಛಂದಃ । ಹರಿವಾಯೂ ದೇವತೇ ॥

**ಪ್ರಾಣಾಯಾಮಃ** ॥ ಓಂ ಪ್ರಾಣಾಯ ನಮಃ । ಓಂ ಅಪಾನಾಯ ನಮಃ । ಓಂ ವ್ಯಾನಾಯ ನಮಃ । ಓಂ ಉದಾನಾಯ ನಮಃ । ಓಂ ಸಮಾನಾಯ ನಮಃ ॥

**ಷಡಂಗನ್ಯಾಸಃ** ॥ ಓಂ ಪ್ರಾಣಾಯ ಹೃದಯಾಯ ನಮಃ । ಓಂ ಅಪಾನಾಯ ಶಿರಸೇ ಸ್ವಾಹಾ । ಓಂ ವ್ಯಾನಾಯ ಶಿಖಾಯೈ ವಷಟ್ । ಓಂ ಉದಾನಾಯ ಕವಚಾಯ ಹುಮ್ । ಓಂ ಸಮಾನಾಯ ನೇತ್ರಾಭ್ಯಾಂ ವೌಷಟ್ । ಓಂ ಆತ್ಮನೇ ಅಸ್ತ್ರಾಯ ಫಟ್ ॥

**ಧ್ಯಾನಮ್** ॥ ಓಂ ಉದ್ಯದ್ರವಿಪ್ರಕರಸನ್ನಿಭಮಚ್ಯುತಾಂಕೇ ಸ್ವಾಸೀನಮಸ್ಯ ನುತಿನಿತ್ಯವಚಃಪ್ರವೃತ್ತಿಮ್ । ಧ್ಯಾಯೇದ್ಗದಾಭಯಕರಂ ಸುಕೃತಾಂಜಲಿಂ ತಂ ಪ್ರಾಣಂ ಯಥೇಷ್ಟತನುಮುನ್ನತಕರ್ಮಶಕ್ತಿಮ್ ॥

ಶ್ರೀಮದಾನಂದತೀರ್ಥಭಗವತ್ಪಾದಕೃತಾ

## ಶ್ರೀ ನ ರ ಸಿಂ ಹ ನ ಖ ಸ್ತು ತಿಃ

**ಪಾಂತ್ವಸ್ಮಾನ್ ಪುರುಹೂತವೈರಿಬಲವನ್ಮಾತಂಗಮಾದ್ಯದ್-ಘಟಾಕುಂಭೋಚ್ಚಾದ್ರಿವಿಪಾಟನಾಧಿಕಪಟುಪ್ರತ್ಯೇಕವಜ್ರಾಯಿ-ತಾಃ ಶ್ರೀಮತ್ಕಂಠೀರವಾಸ್ಯಪ್ರತತಸುನಖರಾದಾರಿತಾರಾತಿದೂರ-ಪ್ರಧ್ವಸ್ತಧ್ವಾಂತಶಾಂತಪ್ರವಿತತಮನಸಾ ಭಾವಿತಾ ಭೂರಿಭಾಗ್ಯೈಃ ॥**

ಪುರುಹೂತ–ಇಂದ್ರನಿಗೆ, ವೈರಿ–ಶತ್ರುಗಳಾದ ದೈತ್ಯರೆಂಬ, ಬಲವತ್–ಬಲವುಳ್ಳ, ಮಾತಂಗ–ಆನೆಗಳ, ಮಾದ್ಯತ್–ಮದಧಾರೆ ಸುರಿಸುವ, ಘಟಾ–ಸಮೂಹದ, ಕುಂಭ–ಕುಂಭಸ್ಥಲಗಳೆಂಬ, ಉಚ್ಚ–ಎತ್ತರವಾದ, ಅದ್ರಿ–ಬೆಟ್ಟಗಳ, ವಿಪಾಟನ–ಸೀಳುವುದರಲ್ಲಿ, ಅಧಿಕ–ಹೆಚ್ಚಾಗಿ, ಪಟು–ಸಮರ್ಥವಾದ, ಪ್ರತ್ಯೇಕ–ಬೇರೆಬೇರೆಯಾದ, ವಜ್ರಾಯಿತಾಃ–ವಜ್ರಾಯುಧದಂತಿರುವ, ದಾರಿತ–ಸೀಳಲ್ಪಟ್ಟ, ಅರಾತಿ–ಕಾಮಾದಿಶತ್ರುಗಳುಳ್ಳ, ದೂರಪ್ರಧ್ವಸ್ತ–ದೂರದಲ್ಲಿಯೇ ನಾಶಮಾಡಲ್ಪಟ್ಟ, ಧ್ವಾಂತ–ಅಜ್ಞಾನರೂಪವಾದ ಕತ್ತಲೆಯುಳ್ಳ, [ಅತ ಏವ]

ಶಾಂತ–ನಿರ್ವಿಕಾರವಾದ, ಪ್ರವಿ–ಸರ್ವೋತ್ತಮವಿಷ್ಣುವಿನಲ್ಲಿ, ತತ–ಸಂಬಂಧಿಸಿದ, (ಅಥವಾ—ಪ್ರವಿತತ–ವಿಶಾಲವಾದ,) ಮನಸಾ–ಮನಸ್ಸಿನಿಂದ, ಭೂರಿಭಾಗ್ಯೈಃ–ಬಹಳ ಭಾಗ್ಯವುಳ್ಳ ಬ್ರಹ್ಮಾದಿದೇವತೆಗಳಿಂದ, ಭಾವಿತಾಃ–ಧ್ಯಾನಿಸಲ್ಪಟ್ಟ, ಶ್ರೀಮಂತ್ಕಂಠೀರವಾಸ್ಯ–ಸಂಪತ್ತುಳ್ಳ ಸಿಂಹದಂತಹ ಮುಖವುಳ್ಳ ಶ್ರೀನೃಸಿಂಹನೇ! ತೇ–ನಿನ್ನ, ಪ್ರತತ–ವಿಸ್ತೃತಗಳಾದ, ಸುನಖರಾಃ–ಶ್ರೇಷ್ಠ ಉಗುರುಗಳು [ಅಥವಾ — ಶ್ರೀಮನ್ನೃಸಿಂಹನ ವಿಶಾಲ ಉಗುರುಗಳು], ಅಸ್ಮಾನ್-ನಮ್ಮನ್ನು, ಪಾಂತು–ರಕ್ಷಿಸಲಿ.

ದೇವಶತ್ರುಗಳಾದ ದೈತ್ಯರೆಂಬ ಮದ್ದಾನೆಗಳ ಹಿಂಡಂಗಳೆಂಬ ಬೆಟ್ಟಗಳನ್ನು ಸೀಳುವುದರಲ್ಲಿ ವಜ್ರದಂತಿರುವ, ಅರಿಷಡ್ವರ್ಗವನ್ನು ಜಯಿಸಿ, ಅಜ್ಞಾನವನ್ನು ಕಳೆದುದರಿಂದಲೇ ಶಾಂತವಾಗಿರುವ ಮನಸ್ಸಿನಿಂದ ದೇವಸಮೂಹಗಳಿಂದ ಧ್ಯಾನಿಸಲ್ಪಟ್ಟ ಶ್ರೀನೃಸಿಂಹನ ಉಗುರುಗಳು ನಮ್ಮನ್ನು ಕಾಯಲಿ. (ಈ ಶ್ಲೋಕವನ್ನಾರಂಭಿಸಿ ಕ್ರಮದಂತೆ ಪುರಶ್ಚರಣ ಮಾಡಿದರೆ ಮೋಕ್ಷಸಿದ್ಧಿಫಲ.) ॥ ೧ ॥

**[ಲಕ್ಷ್ಮೀಕಾಂತ ಸಮಂತತೋಽಪಿ ಕಲಯನ್ ನೈವೇಶಿತುಸ್ತೇ ಸಮಂ ಪಶ್ಯಾಮ್ಯುತ್ತಮವಸ್ತು ದೂರತರತೋಽಪಾಸ್ತಂ ರಸೋ ಯೋಽಷ್ಟಮಃ । ಯದ್ರೋಷೋತ್ಕರದಕ್ಷನೇತ್ರಕುಟಿಲಪ್ರಾಂತೋತ್ಥಿತಾಗ್ನಿಸ್ಫುರತ್ ಖದ್ಯೋತೋಪಮವಿಸ್ಫುಲಿಂಗಭಸಿತಾ ಬ್ರಹ್ಮೇಶಶಕ್ರೋತ್ಕರಾಃ ॥ ೨ ॥]**

ಇತಿ ಶ್ರೀನರಸಿಂಹನಖಸ್ತುತಿಃ ಸಂಪೂರ್ಣಾ[೧]

[ಲಕ್ಷ್ಮೀಕಾಂತ–ಲಕ್ಷ್ಮೀದೇವಿಯ ಪತಿಯಾದ ನೃಸಿಂಹನೇ! (ಅಹಂ–ನಾನು) ತೇ–ನಿನಗೆ, ಸಮಂ–ಸದೃಶವಾದ, ವಸ್ತು–ಉತ್ತಮ ಪದಾರ್ಥವನ್ನು, ನ ಪಶ್ಯಾಮಿ–ಕಾಣುವುದಿಲ್ಲ. ಏವ–ನಿಶ್ಚಯ. (ನಿನಗೆ ಸರಿಯಾದ ವಸ್ತುವಿಲ್ಲವೆಂಬುದಕ್ಕೆ ಯೋಗಿಯಾದ ನನ್ನ ಪ್ರತ್ಯಕ್ಷಪ್ರಮಾಣ. ಶಾಸ್ತ್ರವಿಚಾರದಿಂದ ಸದೃಶ ವಸ್ತುವನ್ನು ತಿಳಿಯಬಹುದೆಂದರೆ: —) ಸಮಂತತಃ–ಶಾಸ್ತ್ರಗಳಲ್ಲೆಲ್ಲ, ವಿಕಲಯನ್–ವಿಚಾರಮಾಡುತ್ತಾ, ನ ಪಶ್ಯಾಮಿ–ನೋಡುವುದಿಲ್ಲ, ಯಃ–ಯಾವ ರಸವು ಇಲ್ಲವೇ ಇಲ್ಲವೆಂದು ಪ್ರಸಿದ್ಧವೋ, ಸಃ–ಆ, ಅಷ್ಟಮಃ–ಎಂಟನೆಯದಾದ, ರಸ ಇವ–ರಸದಂತೆ, ಉತ್ತಮವಸ್ತು–ನಿನಗಿಂತ ಶ್ರೇಷ್ಠ ವಸ್ತುವು,

೧ ವಾಯುಸ್ತುತಿಯ ಆದ್ಯಂತಗಳಲ್ಲಿ ಭಗವತ್‌ಸ್ತುತಿರೂಪವಾದ ಈ ಎರಡು ಪದ್ಯಗಳನ್ನು ಸಂಪುಟಾಕಾರವಾಗಿ ಪಠಿಸುವುದು ಸಂಪ್ರದಾಯ.

ದೂರತರತಃ–ಅತಿದೂರದಿಂದಲೇ, ಅಪಾಸ್ತಂ–ನಿರಾಕರಿಸಲ್ಪಟ್ಟಿದೆ. (ಮಧುರ-ಆಮ್ಲ-ಲವಣ-ಕಟು-ಕಷಾಯ-ತಿಕ್ತ = ಸಿಹಿ-ಹುಳಿ-ಉಪ್ಪು-ಖಾರ-ಒಗರು-ಕಹಿ ಎಂಬ ಆರು ರಸಗಳು ಮಾತ್ರವೇ ಪ್ರಸಿದ್ಧಗಳು. ಏಳನೇ ರಸವೇ ಇಲ್ಲ, ಎಂಟನೇ ರಸವಂತು ಸುತರಾಂ ಇಲ್ಲ, ಅದರಂತೆ ನೃಸಿಂಹನಿಗಿಂತ ಅಧಿಕ ವಸ್ತುವಿಲ್ಲ, ಬ್ರಹ್ಮರುದ್ರಾದಿಗಳಲ್ಲಿ ಯಾರಾದರೂ ಸಮರೋ ಅಧಿಕರೋ ಇರಬಹುದಷ್ಟೆ? ಎಂದರೆ—) ಬ್ರಹ್ಮೇಶಶಕ್ರೋತ್ಕರಾಃ–ಚತುರ್ಮುಖಬ್ರಹ್ಮರು, ರುದ್ರರು, ಇಂದ್ರರು ಇವರುಗಳ ಸಮೂಹಗಳು, ಯದ್ರೋಷೋತ್ಕರದಕ್ಷನೇತ್ರಕುಟಿಲಪ್ರಾಂತೋತ್ಥಿತಾಗ್ನಿಸ್ಫುರತ್ ಖದ್ಯೋತೋಪಮವಿಷ್ಫುಲಿಂಗಭಸಿತಾಃ = ಯತ್–ಯಾವ ನೃಸಿಂಹದೇವನ, ರೋಷ–ಕೋಪಗಳ, ಉತ್ಕರ–ಸಮೂಹವುಳ್ಳ, ದಕ್ಷನೇತ್ರ–ಬಲಗಣ್ಣಿನ. ಕುಟಿಲ–ವಕ್ರವಾದ. ಪ್ರಾಂತ–ಬದಿಯ ದೆಸೆಯಿಂದ, ಉತ್ಥಿತ–ಹುಟ್ಟಿದ, ಅಗ್ನಿ–ಬೆಂಕಿಯಲ್ಲಿ. ಸ್ಫುರತ್–ಪ್ರಕಾಶಿಸುವ, ಖದ್ಯೋತ–ಮಿಂಚುಹುಳಗಳ, ಉಪಮ–ಸಾಮ್ಯವುಳ್ಳ. ವಿಷ್ಫುಲಿಂಗ–ಕಿಡಿಗಳಿಂದ, ಭಸಿತಾಃ–ಭಸ್ಮೀಭೂತಗಳಾಗಿದ್ದುವೋ. (ಆದುದರಿಂದ ನಿನಗೆ ಯಾರೂ ಸಮರೂ ಅಧಿಕರೂ ಇಲ್ಲ.)]

[ಅರ್ಥಾಂತರ:— ಯಃ–ಯಾವ ನೀನು, ಅಷ್ಟಮಃ–ಎಂಟನೆಯ, ರಸಃ–ರಸನೆನಿಸಿದವನು, (ಛಾಂದೋಗ್ಯೋಪನಿಷದ್ಭಾಷ್ಯದಲ್ಲಿ—ಬ್ರಹ್ಮನು ಆರನೆಯ ರಸ, ಲಕ್ಷ್ಮೀದೇವಿಯು ಏಳನೆಯ ರಸ. ಶ್ರೀಹರಿಯು ಎಂಟನೆಯ ರಸ. ಎಂಟನೆಯ ರಸವು ಈ ಲೋಕದಲ್ಲಿ ಇಲ್ಲದುದರಿಂದ, ಎಂಟನೆಯ ರಸವೆನಿಸಿದ ಶ್ರೀಹರಿಯು ಸರ್ವೋತ್ತಮನೆಂದು ಹೇಳಲ್ಪಟ್ಟಿದೆ.) ಅಥವಾ ಪೃಥಿವಿ, ವರುಣ-ಸೋಮ-ರುದ್ರ-ಸರಸ್ವತೀ-ಬ್ರಹ್ಮ-ಲಕ್ಷ್ಮೀ-ಈ ಏಳು ರಸವೆನಿಸಿದವರು; ಎಂದರೆ ಒಬ್ಬರ ಮೇಲೊಬ್ಬರು ಶ್ರೇಷ್ಠರು, ಎಂಟನೆಯ ರಸವೆನಿಸಿದವನು ಶ್ರೀನಾರಾಯಣನು ಸರ್ವೋತ್ತಮನೆಂದು ಭಾವ.]

[ಪ್ರಳಯಕಾಲದಲ್ಲಿ ಬ್ರಹ್ಮರುದ್ರಾದಿಗಳನ್ನೂ ತನ್ನ ಕಣ್ಣಿನ ಜ್ವಾಲೆಯಿಂದ ಸುಡುವ ಶಕ್ತಿವಂತನಾದ ನೃಸಿಂಹನಿಗೆ ಸಮರಾಗಲೀ ಉತ್ತಮರಾಗಲೀ ಬೇರೆ ಇಲ್ಲದಿರುವುದರಿಂದ, ನರಸಿಂಹನು ಬ್ರಹ್ಮರುದ್ರಾದಿ ಸಮನೆಂದಾಗಲೀ ಬ್ರಹ್ಮರುದ್ರಾದಿಗಳು ಈತನಿಂದ ಶ್ರೇಷ್ಠರೆಂದಾಗಲೀ ತಿಳಿಯಬಾರದು. ನರಹರಿಯೇ ಸರ್ವೋತ್ತಮನೆಂದು ಧ್ಯಾನಿಸಬೇಕೆಂದು ಬೋಧಿಸಲ್ಪಟ್ಟಿದೆ. ಇಪರಿಂದ"ನೃಸಿಂಹರೂಪೀ ಸರ್ವೇಷಾಂ ಹತ್ವಾ ತಾಭಿರಲಂಕೃತಃ । ನೃತ್ಯತೇ ಪ್ರಲಯೇ ದೇವಃ...."

ಇತ್ಯಾದಿ ಭಾಗವತ ಪ್ರಮಾಣಗಳಿಂದ ನೃಸಿಂಹನು ಅನೇಕ ರೂಪಗಳಿಂದ ಎಲ್ಲರನ್ನೂ ಸಂಹರಿಸುವನೆಂಬ ಪ್ರಮಾಣಯುಕ್ತಿ ಸೂಚಿತವಾಗಿದೆ ॥ ೨ ॥]

ಕವಿಕುಲತಿಲಕಶ್ರೀಮತ್ತ್ರಿವಿಕ್ರಮಪಂಡಿತಾಚಾರ್ಯಕೃತಾ

# ಶ್ರೀ ವಾಯುಸ್ತುತಿಃ

**ಓಂ ಶ್ರೀಮದ್ವಿಷ್ಣ್ವಂಘ್ರಿನಿಷ್ಠಾತಿಗುಣಗುರುತಮಶ್ರೀಮದಾನಂದತೀರ್ಥತ್ರೈಲೋಕ್ಯಾಚಾರ್ಯಪಾದೋಜ್ಜ್ವಲಜಲಜಲಸತ್ಪಾಂಸವೋಽಸ್ಮಾನ್ ಪುನಂತು । ವಾಚಾಂ ಯತ್ರ ಪ್ರಣೇತ್ರೀ ತ್ರಿಭುವನಮಹಿತಾ ಶಾರದಾ ಶಾರದೇಂದುಜ್ಯೋತ್ಸ್ನಾಭದ್ರಸ್ಮಿತಶ್ರೀಧವಲಿತಕಕುಭಾ ಪ್ರೇಮಭಾರಂ ಬಭಾರ ॥ ೧ ॥**

ಶ್ರೀಮದ್ವಿಷ್ಣ್ವಂಘ್ರಿನಿಷ್ಠಾತಿಗುಣಗುರುತಮಶ್ರೀಮದಾನಂದತೀರ್ಥತ್ರೈಲೋಕ್ಯಾಚಾರ್ಯಪಾದೋಜ್ಜ್ವಲಜಲಜಲಸತ್ಪಾಂಸವಃ = ಶ್ರೀಮತ್–ಲಕ್ಷ್ಮೀಸಹಿತನಾದ, ವಿಷ್ಣು–ನಾರಾಯಣನ, ಅಂಘ್ರಿ–ಪಾದಗಳಲ್ಲಿ, ನಿಷ್ಠಾ–ಸ್ಥಿರಭಕ್ತಿಯಿಂದ, ಅತಿಗುಣ–ಅಧಿಕಗುಣವುಳ್ಳ, ಗುರುತಮ–ಮುಖ್ಯಗುರುಗಳಾದ, ಶ್ರೀಮದಾನಂದತೀರ್ಥ–ಆನಂದಕರಶಾಸ್ತ್ರವುಳ್ಳವರಾದುದರಿಂದ ಕಾಂತಿಯುಳ್ಳ ಆನಂದತೀರ್ಥರೆನಿಸಿದ, ತ್ರೈಲೋಕ್ಯಾಚಾರ್ಯ–ಮೂರುಲೋಕದ ಗುರುಗಳ, ಪಾದ–ಚರಣಗಳೆಂಬ, ಉಜ್ಜ್ವಲ–ಪ್ರಕಾಶಮಾನಗಳಾದ, ಜಲಜ–ತಾವರೆಗಳಲ್ಲಿ, ಲಸತ್–ಶೋಭಿಸುವ, ಪಾಂಸವಃ–ಧೂಳಿಗಳು, ಅಸ್ಮಾನ್–ನಮ್ಮನ್ನು, ಪುನಂತು–ಪವಿತ್ರೀಕರಿಸಲಿ, ಯತ್ರ–ಯಾವ ಪಾದಧೂಳಿಗಳಲ್ಲಿ, ವಾಚಾಂ–ವಾಗಿಂದ್ರಿಯಗಳಿಗೆ, ಪ್ರಣೇತ್ರೀ–ಅಭಿಮಾನಿದೇವತೆಯಾಗಿ ನಿಯಾಮಕಳಾದ, ಅಥವಾ ಶ್ರುತಿಸ್ಮೃತೀತಿಹಾಸಪುರಾಣಾದಿ ವಚನಗಳಿಗೆ ಶೇಷಗರುಡಾದಿಗಳನ್ನು ಕುರಿತು ಹರಿಸರ್ವೋತ್ತಮತ್ವರೂಪವಾದ ಅರ್ಥವನ್ನು ಪ್ರತಿಪಾದಿಸುವ, ತ್ರಿಭುವನಮಹಿತಾ–ಮೂರುಲೋಕಗಳಿಂದ [ಗಳಲ್ಲಿ] ಪೂಜಿಸಲ್ಪಡುವ, ಶಾರದೇಂದುಜ್ಯೋತ್ಸ್ನಾಭದ್ರಸ್ಮಿತಶ್ರೀಧವಲಿತಕಕುಭಾ = ಶಾರದ–ಶರದೃತುವಿನಲ್ಲಿರುವ, ಇಂದು–ಚಂದ್ರನ, ಜ್ಯೋತ್ಸ್ನಾ–ಬೆಳದಿಂಗಳಿನಂತೆ, ಭದ್ರ–ಮಂಗಳಕರವಾದ, ಸ್ಮಿತಶ್ರೀ–ಕಿರುನಗೆಯ ಕಾಂತಿಯಿಂದ, ಧವಲಿತ–ಶುಭ್ರಗೊಳಿಸಿದ, ಕಕುಭಾ–ದಿಕ್ಕುಗಳುಳ್ಳ, ಶಾರದಾ–ಭಾರತೀದೇವಿಯು, ಪ್ರೇಮಭಾರಂ–ಪ್ರೀತಿಯ ಸಮೃದ್ಧಿಯನ್ನು [ಭಕ್ತ್ಯತಿಶಯವನ್ನು], ಬಭಾರ–ಧರಿಸಿದಳೋ [ಅಂತಹ ಧೂಳಿಗಳು ಪವಿತ್ರೀಕರಿಸಲಿ.]

**ಸೂಚನೆ:—** ಕವಿಕುಲಶಿರೋಮಣಿ ತ್ರಿವಿಕ್ರಮಪಂಡಿತಾಚಾರ್ಯರು ತನ್ನ ಇಷ್ಟದೇವತೆಯಾದ ಲಕ್ಷ್ಮೀಸಮೇತನಾದ ಶ್ರೀವಿಷ್ಣುವನ್ನೂ, ಮುಖ್ಯ ಗುರುಗಳಾದ ಶ್ರೀಮಧ್ವಾಚಾರ್ಯರನ್ನೂ ತನ ಗ್ರಂಥದ ಮಂಗಲಾಚರಣಕ್ರಮದಿಂದ ಸ್ತುತಿಸಿದ್ದಾರೆ.

ಇಲ್ಲಿ ವಾಯುದೇವರ ಪತ್ನಿಯಾದ ಭಾರತೀದೇವಿಯೇ ಶಾರದಾಶಬ್ದದಿಂದ ಹೇಳಲ್ಪಟ್ಟಿದ್ದಾಳೆ. ಮುಂದಿನ ಕಲ್ಪದಲ್ಲಿ ಬ್ರಹ್ಮಪಟ್ಟಕ್ಕೆ ಬರುವ ವಾಯುದೇವರಿಗೆ ಪತ್ನಿಯಾದ ಈಕೆಯೆ ಮುಂದೆ ಸರಸ್ವತಿಯಾಗತಕ್ಕವಳಾದುದರಿಂದ ಸರಸ್ವತಿಯ ನಾಮಗಳು ಈಕೆಗೂ ಸಲ್ಲುತ್ತವೆ.

ಸರಸ್ವತೀದೇವಿಯಂತೆ ಸಕಲವಚನಾಭಿಮಾನಿನಿಯಾದ ಭಾರತೀದೇವಿಯು ಯಾವ ವಾಯುದೇವರ ಪಾದಧೂಳಿಯಲ್ಲಿ ಪ್ರೀತ್ಯತಿಶಯವನ್ನು ಧರಿಸಿದ್ದಳೋ, ಆ ಶ್ರೀಮಧ್ವಾಚಾರ್ಯರೆಂಬ ತ್ರಿಲೋಕಗುರುಶ್ರೇಷ್ಠರ ಪಾದಧೂಳಿಗಳು ನಮ್ಮನ್ನು ಪುನೀತರನ್ನಾಗಿ ಮಾಡಲಿ. (ಈ ಶ್ಲೋಕಪುರಶ್ಚರಣದಿಂದ ವಾಕ್ ಸಿದ್ಧಿ ಅಥವಾ ಸರ್ವಾಭೀಷ್ಟಸಿದ್ಧಿ.) ॥ ೧ ॥

ಪುನಃ ಆ ಪಾದಧೂಳಿಗಳನ್ನೇ ವರ್ಣಿಸುತ್ತಾರೆ:

**ಉತ್ಕಂಠಾಕುಂಠಕೋಲಾಹಲಜವವಿದಿತಾಜಸ್ರಸೇವಾನುವೃದ್ಧ-ಪ್ರಾಜ್ಞಾತ್ಮಜ್ಞಾನಧೂತಾಂಧತಮಸಸುಮನೋಮೌಲಿರತ್ನಾವಲೀನಾಮ್ । ಭಕ್ತ್ಯುದ್ರೇಕಾವಗಾಢಪ್ರಘಟನಸಘಟಾತ್ಕಾರಸಂಘೃಷ್ಯಮಾಣಪ್ರಾಂತಪ್ರಾಗ್ರ್ಯಾಂಘ್ರಿಪೀಠೋತ್ಥಿತಕನಕರಜಃಪಿಂಜರಾರಂಜಿತಾಶಾಃ ॥ ೨ ॥**

ಉತ್ಕಂಠಾಕುಂಠ......ರತ್ನಾವಲೀನಾಂ = ಉತ್ಕಂಠಾ—ಲವಲವಿಕೆಯಿಂದ, ಅಕುಂಠ—ಅಭಿವೃದ್ಧಗಳಾದ, ಕೋಲಾಹಲಜವ—ಕಲಕಲಧ್ವನಿಯೂ ವೇಗವೂ ಇವುಗಳಿಂದ, ವಿದಿತ—ತಿಳಿಯಲ್ಪಟ್ಟ, ಅಜಸ್ರ—ನಿರಂತರವಾದ, ಸೇವಾ—ಸೇವೆಯಿಂದ, ಅನುವೃದ್ಧ—ಪ್ರತಿದಿನ ವೃದ್ಧಿಹೊಂದಿದ, ಪ್ರಾಜ್ಞಾತ್ಮ—ಸರ್ವಜ್ಞನಾದ ಪರಮಾತ್ಮನ, ಜ್ಞಾನ—ಜ್ಞಾನದಿಂದ, ಧೂತ—ತಿರಸ್ಕರಿಸಲ್ಪಟ್ಟ, ಅಂಧತಮಸ—ಅಜ್ಞಾನ ಅಥವಾ ಮಹಾನರಕವುಳ್ಳ, ಸುಮನಸ್—ದೇವತೆಗಳ, ಮೌಲಿ—ಕಿರೀಟಗಳಲ್ಲಿದ್ದ, ರತ್ನ-ರತ್ನಗಳ, ಆವಲೀನಾಂ—ಪಂಕ್ತಿಗಳ, ಭಕ್ತ್ಯುದ್ರೇಕಾ...ರಂಜಿತಾಶಾಃ = ಭಕ್ತಿ—ಮಾಹಾತ್ಮ್ಯಜ್ಞಾನಪೂರ್ವಕಸುದೃಢಸ್ನೇಹದ, ಉದ್ರೇಕ—ಆಧಿಕ್ಯದಿಂದ, ಅವಗಾಢ—ದೃಢವಾದ, ಪ್ರಘಟನ—ಸಂಘಟ್ಟನದಿಂದ, ಸಘಟಾತ್ಕಾರ—ಘಟಾತ್ ಎಂಬ ಶಬ್ದದಿಂದ ಕೂಡಿದ್ದು ಹೇಗೋ ಹಾಗೆ, ಸಂಘೃಷ್ಯಮಾಣ—ಪೀಡಿಸಲ್ಪಡುವ, ಪ್ರಾಂತ—ಬದಿಯುಳ್ಳ, ಪ್ರಾಗ್ರ್ಯ—ಶ್ರೇಷ್ಠವಾದ, ಅಂಘ್ರಿಪೀಠ—ಪಾದಪೀಠದ ದೆಸೆಯಿಂದ, ಉತ್ಥಿತ—ಮೇಲಕ್ಕೆದ್ದ, ಕನಕರಜಃ—ಚಿನ್ನದ ಧೂಳಿ

ಗಳಿಂದ, ಪಿಂಜರಾಃ–ಹಳದಿಕೆಂಪಾದವುಗಳಾಗಿ. ಆರಂಜಿತ–ಸುತ್ತಲೂ ಅಲಂಕರಿಸಲ್ಪಟ್ಟ, ಆಶಾಃ–ದಿಕ್ಕುಗಳುಳ್ಳ, [(ಅಥವಾ) ಕನಕರಜಃ–ಚಿನ್ನದ ಧೂಳಿಗಳಿಂದ, ಪಿಂಜರ–ಹಳದಿಕೆಂಪಾದಂದು ಹೇಗೋ ಹಾಗೆ, ಆರಂಜಿತ–ಕೆಂಪಾಗಿ ಮಾಡಲ್ಪಟ್ಟ, ಆಶಾಃ–ದಿಕ್ಕುಗಳುಳ್ಳ, ಶ್ರೀಮದಾನಂದತೀರ್ಥ ... ಪಾಂಸವಃ–ಮಧ್ವಾಚಾರ್ಯರ ಪಾದಧೂಳಿಗಳು, ಪುನಂತು–ಪವಿತ್ರೀಕರಿಸಲಿ.] (ಹಿಂದಿನ ಶ್ಲೋಕದಲ್ಲಿ ಅನ್ವಯಿಸಬೇಕು.)

ದೇವತೆಗಳು ಶ್ರೀಮದಾಚಾರ್ಯರಿಂದ ಪರಮಾತ್ಮಜ್ಞಾನ ಪಡೆದು ಅಜ್ಞಾನವನ್ನು ಕಳೆಯುವುದಕ್ಕಾಗಿ ಲವಲವಿಕೆಯಿಂದ ನಾನು ಮೊದಲು ತಾನು ಮೊದಲೆಂದು ಕೋಲಾಹಲ ಮತ್ತು ವೇಗಗಳಿಂದ ಬಂದು ಶ್ರೀಮದಾಚಾರ್ಯರ ಚಿನ್ನದ ಪಾದಪೀಠಗಳಿಗೆ ತಮ್ಮ ತಲೆ ಬಗ್ಗಿಸಿ ವಂದಿಸಿದಾಗ ಅವರ ಕಿರೀಟದ ರತ್ನದ ಪುಡಿಯಿಂದಲೂ ಪೀಠದ ಚಿನ್ನದ ಪುಡಿಯಿಂದಲೂ ಮಿಶ್ರಿತಗಳಾದ ಶ್ರೀಮಧ್ವಗುರು ಪಾದಪದ್ಮಧೂಳಿ ದಿಕ್ಕುಗಳನ್ನು ಹಳದಿಕೆಂಪು ಬಣ್ಣದವುಗಳನ್ನಾಗಿ ಮಾಡಿದವು. ಚಿನ್ನದ ಪುಡಿಯಿಂದ ಹಳದಿಯಾದುವು: ರತ್ನದ ಧೂಳಿಯಿಂದ ಕೆಂಪಾದುವು. (ಈ ಶ್ಲೋಕಪುರಶ್ಚರಣದಿಂದ ಪ್ರಜ್ಞಾ [ಜ್ಞಾನ] ಲಾಭ.)

ಗುರುಪಾದಧೂಳಿವರ್ಣನದ ನಿಮಿತ್ತದಿಂದ ತನ್ನ ಅಹಂಕಾರಖಂಡನವನ್ನು ಮಾಡುತ್ತಾರೆ:

**ಜನ್ಮಾಧಿವ್ಯಾಧ್ಯುಪಾಧಿಪ್ರತಿಹತಿವಿರಹಪ್ರಾಪಕಾಣಾಂ ಗುಣಾನಾ-ಮಗ್ರ್ಯಾಣಾಮರ್ಪಕಾಣಾಂ ಚಿರಮುದಿತಚಿದಾನಂದಸಂದೋಹ-ದಾನಾಮ್ । ಏತೇಷಾಮೇಷದೋಷಪ್ರಮುಷಿತಮನಸಾಂ ದ್ವೇಷಿ-ಣಾಂ ದೂಷಕಾಣಾಂ ದೈತ್ಯಾನಾಮಾರ್ತಿಮಂಧೇ ತಮಸಿ ವಿದಧತಾಂ ಸಂಸ್ತವೇ ನಾಸ್ಮಿ ಶಕ್ತಃ ॥ ೩ ॥**

ಏಷಃ [ಅಹಂ]–ಸ್ತುತಿಸಲು ಅರಂಭಿಸಿದ ನಾನು, ಜನ್ಮಾಧಿವ್ಯಾಧ್ಯುಪಾಧಿ-ಪ್ರತಿಹತಿವಿರಹಪ್ರಾಪಕಾಣಾಂ = ಜನ್ಮ–ಹುಟ್ಟುವುದು, ಆಧಿ–ಮನೋವ್ಯಥೆ, ವ್ಯಾಧಿ–ಶರೀರದ ರೋಗ, ಇವುಗಳಿಗೆ, ಉಪಾಧಿ–ಕಾರಣಗಳಾದ, ಅಜ್ಞಾನ-ಕರ್ಮಾದಿಗಳ, ಪ್ರತಿಹತಿ–ಮರಳಿ ಮರಳಿ ಬರುವಿಕೆಗೆ, ವಿರಹ–ವಿಯೋಗವನ್ನು, ಪ್ರಾಪಕಾಣಾಂ–ಹೊಂದಿಸತಕ್ಕ, (ಅಥವಾ— ಉಪಾಧಿ–ಶರೀರದ, ಪ್ರತಿಹತಿ–ಮರಣಕ್ಕೆ, ವಿರಹ–ವಿಯೋಗವನ್ನು, ಪ್ರಾಪಕಾಣಾಂ–ಹೊಂದಿಸತಕ್ಕ,) ಅಗ್ರ್ಯಾಣಾಂ – ಶ್ರೇಷ್ಠಗಳಾದ, ಗುಣಾನಾಂ – ಭಕ್ತಿಜ್ಞಾನವೈರಾಗ್ಯಾದಿಗುಣಗಳನ್ನು, (ಯೋಗ್ಯ ಜನರಿಗೆ) ಅರ್ಪಕಾಣಾಂ–ಕೊಡತಕ್ಕ, ಉದಿತಚಿದಾನಂದ-

ಸಂದೋಹದಾನಾಂ = ಉದಿತ–ಯೋಗ್ಯತಾನುಸಾರ ಪ್ರಕಾಶಿಸುವ, ಚಿತ್–ಜ್ಞಾನ, ಆನಂದ–ಸಂತೋಷ ಇವುಗಳ, ಸಂದೋಹ–ಸಮೂಹವನ್ನು, ದಾನಾಂ–ಕೊಡತಕ್ಕ, ದೋಷಪ್ರಮುಷಿತಮನಸಾಂ=ದೋಷ–ಮಿಥ್ಯಾಜ್ಞಾನಾದಿ ದೋಷಗಳಿಂದ, ಪ್ರಮುಷಿತ–ದೂಷಿಸಲ್ಪಟ್ಟ, ಮನಸಾಂ–ಮನಸ್ಸುಳ್ಳ, ದ್ವೇಷಿಣಾಂ–ವಿಷ್ಣುವೈಷ್ಣವದ್ವೇಷಿಗಳಾದ (ಅಥವಾ ಅಂತರ್ದ್ವೇಷವುಳ್ಳ), ದೂಷಕಾಣಾಂ–ದುರ್ವಾಕ್ಯಗಳಿಂದ ದೂಷಣೆಮಾಡುವ, ದೈತ್ಯಾನಾಂ–ದೈತ್ಯರಿಗೆ, ಅಂಧೇತಮಸಿ–ಅಂಧಂತಮಸ್ಸೆಂಬ ನಿತ್ಯನರಕದಲ್ಲಿ, ಆರ್ತಿಂ–ವ್ಯಥೆಯನ್ನು, ಚಿರಂ–ನಿರವಧಿಕ ಸಮಯದಲ್ಲಿ, ವಿದಧತಾಂ–ಮಾಡತಕ್ಕ, ಏತೇಷಾಂ–ಹಿಂದೆ ವರ್ಣಿಸಲ್ಪಟ್ಟ ಶ್ರೀಮದಾನಂದತೀರ್ಥಪಾದಧೂಳಿಗಳ, ಸಂಸ್ತವೇ–ಚೆನ್ನಾಗಿ ಸ್ತೋತ್ರಮಾಡುವ ವಿಷಯದಲ್ಲಿ, ಶಕ್ತಃ–ಸಮರ್ಥನು, ನಾಸ್ಮಿ–ಇರುವುದಿಲ್ಲ.

ಪಂಡಿತಾಚಾರ್ಯರು ಸ್ತುತಿಸಲು ಶಕ್ತರಿದ್ದರೂ ಅಹಂಕಾರಪರಿಹಾರಕ್ಕಾಗಿ ಗುರುಪಾದಧೂಳಿಗಳ ಸ್ತೋತ್ರದಲ್ಲಿ ತಾನು ಅಶಕ್ತನೆನ್ನುತ್ತಾರೆ. ಏಕೆಂದರೆ ಆ ಧೂಳಿಗಳು ಜನನ-ಮರಣ-ಆಧಿವ್ಯಾಧಿದೋಷನಿವಾರಕಗಳು; ಜ್ಞಾನಭಕ್ತ್ಯಾದಿ ಗುಣಗಳನ್ನೂ ನಿತ್ಯವಾದ ಮೋಕ್ಷಸುಖವನ್ನೂ ಕೊಡತಕ್ಕವು. ಇಂತಹ ಮಾಹಾತ್ಮ್ಯವುಳ್ಳ ಧೂಳಿಗಳ ವರ್ಣನೆಯಲ್ಲಿ ತಾನು ಹೇಗೆ ಸಮರ್ಥನಾದೇನು? (ಈ ಶ್ಲೋಕಪುರಶ್ಚರಣದಿಂದ ಸಕಲ ಆಧಿಮಹಾವ್ಯಾಧಿಪೀಡಾಪರಿಹಾರ) ॥ ೩ ॥

ಗುರುಪಾದಧೂಳಿವರ್ಣನದಲ್ಲಿಯೇ ಅಶಕ್ತನಾದ ತನಗೆ ಸಾಕ್ಷಾತ್ ಗುರುವರ್ಣನದಲ್ಲಿ ಶಕ್ತಿಯಿಲ್ಲವೆಂಬುದು ಸುತರಾಂ ಪ್ರಸಿದ್ಧವೆಂದು ಅಹಂಕಾರವನ್ನು ಖಂಡಿಸಿಕೊಳ್ಳುತ್ತಾರೆ:

**ಅಸ್ಯಾವಿಷ್ಕರ್ತುಕಾಮಂ ಕಲಿಮಲಕಲುಷೇಽಸ್ಮಿನ್ ಜನೇ ಜ್ಞಾನಮಾರ್ಗಂ ವಂದ್ಯಂ ಚಂದ್ರೇಂದ್ರರುದ್ರದ್ಯುಮಣಿಫಣಿವಯೋನಾಯಕಾದ್ಯೈರಿಹಾದ್ಯ । ಮಧ್ವಾಖ್ಯಂ ಮಂತ್ರಸಿದ್ಧಂ ಕಿಮುತ ಕೃತವತೋ ಮಾರುತಸ್ಯಾವತಾರಂ ಪಾತಾರಂ ಪಾರಮೇಷ್ಠ್ಯಂ ಪದಮಪವಿಪದಃ ಪ್ರಾಪ್ತುರಾಪನ್ನಪುಂಸಾಮ್ ॥ ೪ ॥**

ಅದ್ಯ–ಈಗ, ಇಹ–ಈ ಭೂಮಿಯಲ್ಲಿ, ಕಲಿಮಲಕಲುಷೇ=ಕಲಿ–ಕಲಿಯೆಂಬ ದೈತ್ಯನಿಂದುಂಟಾದ, ಮಲ–ಅಜ್ಞಾನಾದಿ ದೋಷದಿಂದ, ಕಲುಷೇ–ಕೆಟ್ಟಿರುವ, ಅಸ್ಮಿನ್–ಈ ಜ್ಞಾನಯೋಗ್ಯವಾದ, ಜನೇ–ಜನರಲ್ಲಿ, ಜ್ಞಾನಮಾರ್ಗಂ=ಜ್ಞಾನತತ್ತ್ವಜ್ಞಾನದ, ಮಾರ್ಗಂ–ದಾರಿಯನ್ನು, ಆವಿಷ್ಕರ್ತುಕಾಮಂ–ಪ್ರಕಟೀಕರಿಸುವುದಕ್ಕೋಸ್ಕರ ಇಚ್ಛೆಯುಳ್ಳ, ಚಂದ್ರೇಂದ್ರರುದ್ರದ್ಯುಮಣಿಫಣಿವಯೋನಾಯಂ-

ಕಾದ್ಯೈಃ = ಚಂದ್ರ–ಚಂದ್ರ, ಇಂದ್ರ–ದೇವೇಂದ್ರ, ರುದ್ರ–ಮಹಾರುದ್ರ, ದ್ಯುಮಣಿ–ಸೂರ್ಯ, ಫಣಿವಯೋನಾಯಕ–ಸರ್ಪರಾಜನಾದ ಮಹಾಶೇಷ, ಪಕ್ಷಿರಾಜನಾದ ಗರುಡ — ಇವರೇ, ಆದ್ಯೈಃ–ಮೊದಲಾದ ದೇವತೆಗಳಿಂದ, ವಂದ್ಯಂ–ನಮಸ್ಕರಿಸಲಿಕ್ಕೂ ಸ್ತುತಿಸಲಿಕ್ಕೂ ಯೋಗ್ಯವಾದ, ಮಂತ್ರಸಿದ್ಧಂ–ಬಳಿತ್ಥೇತ್ಯಾದಿ ವೇದಮಂತ್ರಗಳಿಂದ ಪ್ರಸಿದ್ಧವಾದ, ಮಧ್ವಾಖ್ಯಂ–ಶ್ರೀಮಧ್ವ ಎಂಬ ಹೆಸರುಳ್ಳ, ಆಪನ್ನಪುಂಸಾಂ=ಆಪನ್ನ–ಮರೆಹೊಕ್ಕಿರುವ, ಪುಂಸಾಂ–ಪುರುಷರನ್ನು, ಪಾತಾರಂ–ರಕ್ಷಿಸತಕ್ಕ, ಅವತಾರಂ–ಅವತಾರವನ್ನು, ಕೃತವತಃ–ಮಾಡಿರುವ, ಪಾರಮೇಷ್ಠ್ಯಂ–ಚತುರ್ಮುಖಬ್ರಹ್ಮನಿಂದ ಹೊಂದಲ್ಪಡುವ, ಪದಂ–ಸ್ಥಾನವನ್ನು (ಸತ್ಯಲೋಕಾಧಿಪತ್ಯವನ್ನು), ಪ್ರಾಪ್ತುಃ–ಹೊಂದತಕ್ಕ, ಮಾರುತಸ್ಯ–ಮುಖ್ಯಪ್ರಾಣದೇವರ, ಸಂಸ್ತವೇ ಶಕ್ತೋ ನಾಸ್ಮಿ–ಸ್ತೋತ್ರದಲ್ಲಿ ಸಮರ್ಥನಲ್ಲ ಎಂಬುದು, ಕಿಮುತ–ಏನು ಹೇಳಲಿ? [ಸರ್ವಥಾ ಶಕ್ತನಲ್ಲ.]

ಕಲಿಪೀಡೆಯಿಂದ ಜ್ಞಾನಭ್ರಷ್ಟರಾದ ಸಜ್ಜನರಿಗೆ ಜ್ಞಾನಮಾರ್ಗವನ್ನು ತೋರಿಸಲು, ಗರುಡಶೇಷರುದ್ರಾದಿಗಳಿಂದಲೂ ವಂದ್ಯವಾದ ವೇದಪ್ರಸಿದ್ಧ ಮಧ್ವಾವತಾರವನ್ನು ಕೈಗೊಂಡವರು. ಬ್ರಹ್ಮಪದವಿಗೆ ಬರುವವರು. ಮರೆಹೊಕ್ಕವರನ್ನು ಕಾಯುವವರು, ಇಂತಹ ಮುಖ್ಯಪ್ರಾಣದೇವರ ಸ್ತೋತ್ರಮಾಡಲಿಕ್ಕೆ ತನಗೆ ಎಲ್ಲಿಂದ ಶಕ್ತಿ? (ಈ ಶ್ಲೋಕಪುರಶ್ಚರಣದಿಂದ ಮಂತ್ರಸಿದ್ಧಿ ಅಥವಾ ಜಯಸಿದ್ಧಿ.) ॥ ೪ ॥

ಹಿಂದಿನ ಶ್ಲೋಕಗಳಲ್ಲಿ ಸ್ತುತಿಸಲು ಅಶಕ್ತಿಯನ್ನು ವರ್ಣಿಸಿ, ಅಂತಹ ಶಕ್ತಿಗೆ ಕಾರಣವಾದ ಸದ್ಬುದ್ಧಿಯನ್ನು ಬೇಡುತ್ತಾರೆ:

**ಉದ್ಯದ್ವಿದ್ಯುತ್ಪ್ರಚಂಡಾಂ ನಿಜರುಚಿನಿಕರವ್ಯಾಪ್ತಲೋಕಾವಕಾ-**
**ಶೋ ಬಿಭ್ರದ್ಭೀಮೋ ಭುಜೇ ಯೋಽಭ್ಯುದಿತದಿನಕರಾಭಾಂಗದಾಢ್ಯ-**
**ಪ್ರಕಾಂಡೇ । ವೀರ್ಯೋದ್ಧಾರ್ಯಾಂ ಗದಾಗ್ರ್ಯಾಮಯಮಿಹ**
**ಸುಮತಿಂ ವಾಯುದೇವೋ ವಿದಧ್ಯಾದಧ್ಯಾತ್ಮಜ್ಞಾನನೇತಾ ಯತಿ-**
**ವರಮಹಿತೋ ಭೂಮಿಭೂಷಾಮಣಿರ್ಮೇ ॥ ೫ ॥**

ನಿಜರುಚಿನಿಕರವ್ಯಾಪ್ತಲೋಕಾವಕಾಶಃ=ನಿಜ–ತನ್ನದಾದ, ರುಚಿ–ಪ್ರಕಾಶಗಳ, ನಿಕರ–ಸಮೂಹದಿಂದ, ವ್ಯಾಪ್ತ–ವ್ಯಾಪಿಸಲ್ಪಟ್ಟ, ಲೋಕಾವಕಾಶ–ಲೋಕಗಳ ಪ್ರದೇಶವುಳ್ಳ, ಯಃ–ಯಾವ, ವಾಯುದೇವಃ–ಮುಖ್ಯಪ್ರಾಣದೇವರು, ಭೀಮಃಸನ್–ಭೀಮಸೇನನಾಗಿ, ಉದ್ಯದ್ವಿದ್ಯುತ್ಪ್ರಚಂಡಾಂ = ಉದ್ಯತ್–ಉದಿ

ಸುವ, ವಿದ್ಯುತ್–ಮಿಂಚಿನಂತೆ, ಪ್ರಚಂಡಾಂ–ಭಯಂಕರವಾದ, ವೀರ್ಯೋದ್ದಾರ್ಯಾಂ=ವೀರ್ಯ–ಬಲದಿಂದ, ಉದ್ದಾರ್ಯಾಂ–ಎತ್ತಲಿಕ್ಕಸಾಧ್ಯವಾದ, ಗದಾಗ್ರ್ಯಾಂ–ಗದೆಗಳಲ್ಲಿ ಶ್ರೇಷ್ಠವಾದ ಗದೆಯನ್ನು, ಅಭ್ಯುದಿತದಿನಕರಾಭಾಂಗದಾಢ್ಯಪ್ರಕಾಂಡೇ=ಅಭ್ಯುದಿತ–ಉದಿಸಿದ, ದಿನಕರ–ಸೂರ್ಯನ, ಆಭ–ಪ್ರಕಾಶದಂತಹ ಕಾಂತಿಯುಳ್ಳ, ಅಂಗದ–ತೋಳಬಂದಿಯಿಂದ, ಆಢ್ಯ–ಕೂಡಿದ, ಪ್ರಕಾಂಡೇ–ಕೈಮಧ್ಯಪ್ರದೇಶವುಳ್ಳ, ಭುಜೇ–ಕೈಯಲ್ಲಿ, ಬಿಭ್ರತ್–ಧರಿಸಿದವನಾಗಿ, [ಆಸೀತ್–ಇದ್ದನೋ.] ಅಧ್ಯಾತ್ಮಜ್ಞಾನನೇತಾ=ಅಧ್ಯಾತ್ಮ–ಪರಮಾತ್ಮಜ್ಞಾನವಿಷಯಕವಾದ, ಜ್ಞಾನ–ತಿಳುವಳಿಕೆಗೆ, ನೇತಾ–ನಿಯಾಮಕನೂ, ಯತಿವರಮಹಿತಃ=ಯತಿವರ–ಪರಮಹಂಸರಲ್ಲಿ ಶ್ರೇಷ್ಠರಾದ ಶುಕಸನಕಾದಿಗಳಿಂದ, ಮಹಿತಃ–ಪೂಜಿಸಲ್ಪಟ್ಟವನೂ[ಅಥವಾ ಯತಿಶ್ರೇಷ್ಠರಲ್ಲಿ ಶ್ರೇಷ್ಠನಾದವನೂ] ಭೂಮಿಭೂಷಾಮಣಿಃ=ಭೂಮಿ–ಭೂಮಂಡಲಕ್ಕೆ, ಭೂಷಾಮಣಿಃ–ಅಲಂಕಾರರತ್ನದಂತಿರುವವನೂ [ಭೂಮಿಯಲ್ಲಿ ಅವತರಿಸಿದವನೂ.] ಆದ, ಅಯಂ–ಆ ವಾಯುದೇವನು, ಇಹ–ಈ ಸ್ತೋತ್ರಮಾಡುವ ವಿಷಯದಲ್ಲಿ, ಸುಮತಿಂ–ಶ್ರೇಷ್ಠ ಬುದ್ಧಿಯನ್ನು, ವಿದಧ್ಯಾತ್–ಕೊಡಲಿ.

ಪರಮಾತ್ಮತತ್ತ್ವಜ್ಞಾನಪ್ರವರ್ತಕನೂ, ಯತಿಶ್ರೇಷ್ಠರಾದ ಶುಕಸನಕಾದಿಗಳಿಂದ ಸನ್ಮಾನಿತನೂ ಆದ ಶ್ರೀಮುಖ್ಯಪ್ರಾಣನು ಮಿಂಚಿನಂತೆ ಹೊಳೆವ ಗದೆಯನ್ನು ಧರಿಸಿದ ಭೀಮಾವತಾರವನ್ನು ಮಾಡಿದವನೂ, ಸನಕಾದಿಪರಂಪರೆಯ ಯತಿವಂಶದಲ್ಲಿ ಜ್ಞಾನಪ್ರವರ್ತಕವಾದ ಶ್ರೀಮಧ್ವಾವತಾರವನ್ನು ಧರಿಸಿದವನಾಗಿ ಭೂಮಿಗೆ ಅಲಂಕಾರರತ್ನವೆನಿಸಿದವನೂ ಆದ ಆ ದೇವನು ನನಗೆ ಸುಬುದ್ಧಿಯನ್ನು ಕೊಡಲಿ. (ಈ ಶ್ಲೋಕಪುರಶ್ಚರಣದಿಂದ ಪರಾಕ್ರಮ ಮತ್ತು ಬುದ್ಧಿವೈಶದ್ಯ ಸಿದ್ಧಿ.) ॥ ೫ ॥

ಸಂಸಾರದ ತಾಪವನ್ನು ಪರಿಹರಿಸತಕ್ಕವರಾದುದರಿಂದ ಶ್ರೀಮಧ್ವಾಚಾರ್ಯರನ್ನು ಕ್ಷೀರಸಮುದ್ರವನ್ನಾಗಿ ವರ್ಣಿಸುತ್ತಾರೆ:

**ಸಂಸಾರೋತ್ತಾಪನಿತ್ಯೋಪಶಮದಸದಯಸ್ನೇಹಹಾಸಾಂಬು-**
**ಪೂರಪ್ರೋದ್ಯದ್ವಿದ್ಯಾನವದ್ಯದ್ಯುತಿಮಣಿಕಿರಣಶ್ರೇಣಿಸಂಪೂರಿತಾಶಃ।**
**ಶ್ರೀವತ್ಸಾಂಕಾಧಿವಾಸೋಚಿತತರಸರಲಶ್ರೀಮದಾನಂದತೀರ್ಥಕ್ಷೀ-**
**ರಾಂಭೋಧಿರ್ವಿಭಿಂದ್ಯಾದ್ಭವದನಭಿಮತಂ ಭೂರಿ ಮೇ ಭೂತಿ-**
**ಹೇತುಃ ॥ ೬ ॥**

ಸಂಸಾರೋತ್ತಾಪ........ಪೂರಿತಾಶಃ=ಸಂಸಾರ–ಸಂಸಾರದಲ್ಲಿ, ಉತ್ತಾಪ–

ಆಧ್ಯಾತ್ಮಿಕಾದಿ ಉತ್ತಮ ವ್ಯಥೆಗಳಿಗೆ, ನಿತ್ಯ-ನಿತ್ಯವೂ, ಉಪಶಮದ-ಶಾಂತಿಯನ್ನು ಕೊಡುವ, ಸದಯ-ಕೃಪೆಯಿಂದ ಕೂಡಿದ, ಸ್ನೇಹಹಾಸ-ಭಕ್ತರಲ್ಲಿ ಪ್ರೀತಿಯುಂಟಾದ ನಗುವೆಂಬ, ಅಂಬುಪೂರ-ಜಲಸಮೃದ್ಧಿಯುಳ್ಳದಾಗಿ, ಪ್ರೋದ್ಯತ್-ಉದಿಸಿದ, ವಿದ್ಯಾ-ತತ್ತ್ವಜ್ಞಾನಗಳೆಂಬ, ಅನವದ್ಯ-ದೋಷವಿಲ್ಲದ, ದ್ಯುತಿ-ಕಾಂತಿಯುಳ್ಳ, ಮಣಿ-ರತ್ನಗಳ, ಕಿರಣ-ರಶ್ಮಿಗಳ, ಶ್ರೇಣಿ-ಸಾಲುಗಳಿಂದ, ಸಂಪೂರಿತ-ಚೆನ್ನಾಗಿ ವ್ಯಾಪಿಸಲ್ಪಟ್ಟ, ಆಶಃ-ದಿಕ್ಕುಗಳುಳ್ಳದಾದ, ಭೂತಿಹೇತುಃ=ಭೂತಿ-ಭಕ್ತಿಜ್ಞಾನಾದಿ ಸಂಪತ್ತುಗಳಿಗೆ, ಹೇತುಃ-ಕಾರಣವಾದ, [ಸಮುದ್ರ, ಭೂತಿ-ಲಕ್ಷ್ಮೀದೇವಿಗೆ, ಹೇತುಃ-ಅವತಾರಕಾರಣ,] ಶ್ರೀವತ್ಸಾಂಕಾಧಿ... ಕ್ಷೀರಾಂಭೋಧಿಃ=ಶ್ರೀವತ್ಸ-ಪರಮಾತ್ಮನ ಎದೆಯ ಸುಳಿಯೆಂಬ, ಅಂಕ-ಚಿಹ್ನೆಯುಳ್ಳ ಶ್ರೀನಾರಾಯಣನ, ಅಧಿವಾಸ-ಸನ್ನಿಧಾನಕ್ಕೆ, ಉಚಿತತರ-ಅತ್ಯಂತ ಯೋಗ್ಯರಾದ ಗರುಡರುದ್ರಾದಿಗಳಲ್ಲಿ, ಸರಲ-ಶ್ರೇಷ್ಠರಾದ, ಶ್ರೀಮದಾನಂದತೀರ್ಥ-ಶ್ರೀಮಧ್ವಾಚಾರ್ಯರೆಂಬ, ಕ್ಷೀರಾಂಭೋಧಿಃ-ಕ್ಷೀರಸಮುದ್ರವು, [ಸಮುದ್ರವು ಶ್ರೀಹರಿಯ ಅಧಿವಾಸ-ಆಶ್ರಯಕ್ಕೆ, ಉಚಿತತರ-ಉಚಿತತರಗಳಾದ ಶ್ವೇತದ್ವೀಪಾದಿಗಳಲ್ಲಿ, ಸರಲ-ಮನೋಹರವಾದುದು] ಭವತ್-ಈಗಾಗುವ, ಭೂರಿ-ಬಹಳವಾದ, ಮೇ-ನನ್ನ, ಅನಭಿಮತಂ-ಅನಿಷ್ಟವನ್ನು, ವಿಭೇದ್ಯಾತ್-ಭೇದಿಸಲಿ,

ಕ್ಷೀರಸಮುದ್ರವು ತಾಪಹಾರಿಯಾದ ನೀರಿನಿಂದ ತುಂಬಿದುದು, ರತ್ನಕಿರಣಗಳಿಂದ ದಿಕ್ಕುಗಳನ್ನು ಬೆಳಗಿಸುವುದು, ಶ್ರೀದೇವಿಯ ಅವತಾರಕ್ಕೆ ಹೇತುವು, ಶ್ರೀಹರಿಯ ಆವಾಸಸ್ಥಾನಗಳಾದ ಶ್ವೇತದ್ವೀಪಾದಿಗಳ ಮಧ್ಯದಲ್ಲಿ ತವರುಮನೆಯಾದುದರಿಂದ ಮನೋಹರವಾದುದು. ಅದರಂತೆ ಶ್ರೀಮದಾಚಾರ್ಯರು ಆಧ್ಯಾತ್ಮಿಕಾದಿ ತಾಪತ್ರಯಹಾರಿಗಳು, ದಯೆಸ್ನೇಹಗಳಿಂದ ಪೂರ್ಣರು, ವಿದ್ಯಾರತ್ನಗಳಿಂದ ದಿಕ್ಕುಗಳನ್ನು ಪ್ರಕಾಶಗೊಳಿಸಿದವರು [ವಿದ್ಯೆಗಳನ್ನು ದಿಕ್ಕುದಿಕ್ಕುಗಳಲ್ಲಿ ಪ್ರಕಟಿಸಿದವರು], ಭಕ್ತರಿಗೆ ಭಕ್ತಿಜ್ಞಾನಾದಿಗಳನ್ನು ಕೊಡತಕ್ಕವರು. ಶ್ರೀಹರಿಯ ಸನ್ನಿಧಾನಕ್ಕೆ ಅರ್ಹರಾದ ದೇವತೆಗಳಲ್ಲಿ ಶ್ರೇಷ್ಠರು [ಹೆಚ್ಚಿನ ಸನ್ನಿಧಾನವುಳ್ಳವರು]. (ಹೀಗಿರುವುದರಿಂದ ಶ್ರೀಮದಾಚಾರ್ಯರನ್ನು ಸಮುದ್ರವನ್ನಾಗಿ ವರ್ಣಿಸಿದ್ದಾರೆ.) (ಈ ಶ್ಲೋಕಪುರಶ್ಚರಣದಿಂದ ಸ್ನೇಹ ಮತ್ತು ಪುಣ್ಯಲಾಭ.) ॥ ೬ ॥

ಶ್ರೀಹರಿಯಲ್ಲಿಯೂ ಶ್ರೀವಾಯುದೇವರಲ್ಲಿಯೂ ಮೋಕ್ಷಕ್ಕೆ ಕಾರಣವಾದ ಭಕ್ತಿಯನ್ನು ಬೇಡುತ್ತಾರೆ:

**ಮೂರ್ಧನ್ಯೇಷೋಽಂಜಲಿರ್ಮೇ ದೃಢತರಮಿಹ ತೇ ಬಧ್ಯತೇ ಬಂಧಪಾಶಚ್ಛೇತ್ರೇ ಧಾತ್ರೇ ಸುಖಾನಾಂ ಭಜತಿ ಭುವಿ ಭವಿಷ್ಯದ್ವಿಧಾತ್ರೇ ದ್ಯುಭರ್ತ್ರೇ । ಅತ್ಯಂತಂ ಸಂತತಂ ತ್ವಂ ಪ್ರದಿಶ ಪದಯುಗೇ ಹಂತ ಸಂತಾಪಭಾಜಾಮಸ್ಮಾಕಂ ಭಕ್ತಿಮೇಕಾಂ ಭಗವತ ಉತ ತೇ ಮಾಧವಸ್ಯಾಥ ವಾಯೋಃ ॥ ೭ ॥**

(ಶ್ರೀವಾಯೋ–ಶ್ರೀಮುಖ್ಯಪ್ರಾಣದೇವನೇ !) ಭುವಿ–ಭೂಮಿಯಲ್ಲಿ. ಭಜತಿ–ಸೇವಕಜನದಲ್ಲಿ, ಬಂಧಪಾಶಚ್ಛೇತ್ರೇ=ಬಂಧ–ಅವಿದ್ಯಾಕಾಮಕರ್ಮಾದಿ ರೂಪ ಸಂಸಾರವೆಂಬ, ಪಾಶ–ಹಗ್ಗವನ್ನು, ಛೇತ್ರೇ–ಕತ್ತರಿಸತಕ್ಕ, ಸುಖಾನಾಂ–ಆನಂದಗಳನ್ನು, ದಾತ್ರೇ–ಕೊಡತಕ್ಕ, ಭವಿಷ್ಯದ್ವಿಧಾತ್ರೇ=ಭವಿಷ್ಯದ್–ಮುಂದಿನ ಕಲ್ಪದಲ್ಲಾಗುವ, ವಿಧಾತ್ರೇ–ಚತುರ್ಮುಖಬ್ರಹ್ಮನಾದ, ದ್ಯುಭರ್ತ್ರೇ=ದ್ಯು–ಜ್ಞಾನಾನಂದಾದಿಗುಣಸಂಪನ್ನಳಾದ ಭಾರತೀದೇವಿಗೆ, ಭರ್ತ್ರೇ–ಪತಿಯಾದ, ತೇ–ನಿನಗೋಸ್ಕರ, ಏಷಃ–ಈ, ಮೇ–ನನ್ನ, ಅಂಜಲಿಃ–ಕರಸಂಪುಟವು, ಮೂರ್ಧನಿ–ಶಿರಸ್ಸಿನಲ್ಲಿ, ದೃಢತರಂ–ಅತಿ ಗಟ್ಟಿಯಾಗಿ, ಸತತಂ–ನಿತ್ಯದಲ್ಲಿಯೂ, ಬಧ್ಯತೇ–ಕಟ್ಟಲ್ಪಡುತ್ತದೆ, ಹಂತ–ಸಂತೋಷ, ಭಗವತಃ–ಷಡ್ಗುಣೈಶ್ವರ್ಯ ಪರಿಪೂರ್ಣನಾದ, ಮಾಧವಸ್ಯ–ಲಕ್ಷ್ಮೀಪತಿಯಾದ ಶ್ರೀನಾರಾಯಣನ, ಉತ–ಮತ್ತು, [ಭಗವತಃ–ಪೂಜ್ಯನಾದ] ವಾಯೋಃ–ಶ್ರೀಮುಖ್ಯಪ್ರಾಣನಾದ, ತೇ–ನಿನ್ನ, ಪದಯುಗೇ–ಎರಡು ಪಾದಗಳಲ್ಲಿ, ಏಕಾಂ–ಮುಖ್ಯವಾದ, ಭಕ್ತಿಂ–ಮಾಹಾತ್ಮ್ಯಜ್ಞಾನಪೂರ್ವಕ ಸುದೃಢಸ್ನೇಹವನ್ನು, ಇಹ–ಈ ಸಂಸಾರದಲ್ಲಿ, ಅತ್ಯಂತಂ–ನಿರವಧಿಕವಾಗಿ, ಸಂತಾಪಭಾಜಾಂ–ಹಸಿವು ತೃಷೆ ಮೊದಲಾದ ದುಃಖವನ್ನು ಹೊಂದತಕ್ಕ, ಅಸ್ಮಾಕಂ–ನಮಗೆ, ಪ್ರದಿಶ–ಕೊಡು.

ವಾಯುದೇವನೇ ! ನೀನು ಸಂಸಾರಬಂಧಮೋಚಕನು, ಮೋಕ್ಷಸುಖದಾಯಕನು. ಮುಂದಿನ ಕಲ್ಪದಲ್ಲಿ ಚತುರ್ಮುಖಬ್ರಹ್ಮನಾಗತಕ್ಕವನು. ಭಾರತೀಪತಿಯು. ಇಂತಹ ನಿನಗೆ ವಂದನೆ ಮಾಡುವ ನನ್ನ ಜನ್ಮ ಸಫಲವಾಯಿತೆಂದು ಸಂತೋಷವಾಗಿದೆ. ಸಂಸಾರತಾಪಕ್ಕೊಳಗಾದ ನಮಗೆ ನಿನ್ನ ಮತ್ತು ನಿನ್ನ ಪ್ರಭುವಾದ ಹರಿಯ ಪಾದದಲ್ಲಿಯೂ ಭಕ್ತಿಯನ್ನು ಕೊಡು. ಈ ರೀತಿ ಪ್ರಾರ್ಥಿಸಲು ಅನುಕೂಲವಾಗಿ ಪುಣ್ಯವಶದಿಂದ ಲಭಿಸಿದ ಈಗಿನ ಶರೀರವು ಕೂಡ ಬಹುಭಾಗ್ಯದಿಂದ ಗಳಿಸಿದುದಾಗಿದೆ. (ಈ ಶ್ಲೋಕಪುರಶ್ಚರಣದಿಂದ ಬಂಧಮೋಕ್ಷವೂ ಶರೀರದಾರ್ಢ್ಯವೂ ಸಿದ್ಧಿಸುವುವು.) ॥ ೭ ॥

**ಸಾಭ್ರೋಷ್ಣಾಭೀಶುಶುಭ್ರಪ್ರಭಮಭಯ ನಭೋ ಭೂರಿ ಭೂಭೃದ್ವಿಭೂತಿಭ್ರಾಜಿಷ್ಣುರ್ಭೂರ್ಋಭೂಣಾಂ ಭವನಮಪಿ ವಿಭೋಽಭೇದಿ ಬಭ್ರೇ ಬಭೂವೇ। ಯೇನ ಭ್ರೂವಿಭ್ರಮಸ್ತೇ ಭ್ರಮಯತು ಸುಭೃಶಂ ಬಭ್ರುವದ್ದುರ್ಭೃತಾಶಾನ್ ಭ್ರಾಂತಿರ್ಭೇದಾವಭಾಸಸ್ತ್ವಿತಿ ಭಯಮಭಿಭೂರ್ಭೋಕ್ಷ್ಯತೋ ಮಾಯಿಭಿಕ್ಷೂನ್ ॥ ೮ ॥**

ಅಭಯಂ–ಭಯವಿಲ್ಲದ, ವಿಭೋ–ವ್ಯಾಪಿಸಿಕೊಂಡಿರುವ (ವಾಯೋ–ಮುಖ್ಯಪ್ರಾಣನೇ !), ತೇ–ನಿನ್ನ, ಯೇನ–ಯಾವ ಹುಬ್ಬಿನ ವಿಲಾಸದಿಂದ, ಸಾಭ್ರೋಷ್ಣಾಭೀಶುಶುಭ್ರಪ್ರಭಂ=ಅಭ್ರ–ಮೋಡಗಳು, ಉಷ್ಣಾಭೀಶು–ತೀಕ್ಷ್ಣ ಕಿರಣವುಳ್ಳ ಸೂರ್ಯನು, ಶುಭ್ರಪ್ರಭ–ಬಿಳಿದಾದ ಕಾಂತಿಯುಳ್ಳ ಚಂದ್ರನೂ ಇವರಿಂದ ಕೂಡಿರುವ, ನಭಃ–ಆಕಾಶವು, ಭೂರಿಭೂಭೃದ್ವಿಭೂತಿಭ್ರಾಜಿಷ್ಣುಃ= ಭೂರಿ–ಬಹಳವಾದ, ಭೂಭೃತ್–ಅರಸರ, ವಿಭೂತಿ–ಐಶ್ವರ್ಯದಿಂದ (ಅಥವಾ ಭೂರಿ ಭೂಭೃತ್ – ಬಹಳ ಪರ್ವತಗಳ, ವಿಭೂತಿ – ಸಂಪತ್ತುಗಳಿಂದ), ಭ್ರಾಜಿಷ್ಣುಃ–ಪ್ರಕಾಶಿಸುವ, ಭೂಃ–ಭೂಮಿಯೂ, ಋಭೂಣಾಂ–ದೇವತೆಗಳ, ಭವನಮಪಿ–ಮನೆಯಾದ ದೇವಲೋಕವೂ ಕೂಡ, ಅಭೇದಿ–ಸೀಳಲ್ಪಟ್ಟಿತು, ಬಭ್ರೇ–ಧರಿಸಲ್ಪಟ್ಟಿತು, ಬಭೂವೇ–ಹೊಂದಲ್ಪಟ್ಟಿತು.

ಅಭಿಭೂಃ–ಶತ್ರುಗಳನ್ನು ಸೋಲಿಸತಕ್ಕ, ಸಃ–ಆ ಯಾವ, ಭ್ರೂವಿಭ್ರಮಃ–ಹುಬ್ಬಿನ ವಿಲಾಸವು (ಹುಬ್ಬಿನ ಕುಣಿತವು), ಬಭ್ರುವತ್–ಮುಂಗುಸಿಗಳಂತೆ (ಅಥವಾ ಬೆಕ್ಕುಗಳಂತೆ), ದುರ್ಭೃತಾಶಾನ್–ಮನಶ್ಚಂಚಲತ್ವದಿಂದ ಧರಿಸಲ್ಪಟ್ಟ ಆಶೆಯುಳ್ಳ, ಭೇದಾವಭಾಸಃ=ಭೇದ–ಜೀವ-ಈಶ್ವರ-ಜಡಗಳಿಗೆ ಪರಸ್ಪರವಾಗಿರುವ ಪಂಚಭೇದದ, ಅವಭಾಸಃ–ಜ್ಞಾನವು, ಭ್ರಾಂತಿಃ–ಸುಳ್ಳು, ಇತಿ ತು–ಈ ರೀತಿಯಲ್ಲಿ, (ವದತಃ–ಹೇಳುವ, ಆದುದರಿಂದಲೇ) ಭಯಂ–ಅಂಧತಮಸ್ಸಿನಲ್ಲಿ ಭೀತಿಯಿಂದುಂಟಾದ ದುಃಖವನ್ನು, ಭೋಕ್ಷ್ಯತಃ–ಅನುಭವಿಸತಕ್ಕ, ಮಾಯಿಭಿಕ್ಷೂನ್ – ಮಾಯಾವಾದಿ ಸಂನ್ಯಾಸಿಗಳನ್ನು, ಭೃಶಂ–ಚೆನ್ನಾಗಿ, ಭ್ರಮಯತು–ಮೋಹಿತರನ್ನು ಮಾಡಲಿ.

ಈ ಶ್ಲೋಕದಲ್ಲಿ ಶ್ರೀವಾಯುದೇವರ ಹುಬ್ಬಿನ ವಿಲಾಸಕ್ಕೆ ಆಕಾಶ-ಸ್ವರ್ಗ-ಭೂಮಿ ಮೊದಲಾದ ಸರ್ವಲೋಕಗಳ ಸೃಷ್ಟಿ-ಸ್ಥಿತಿ-ಸಂಹಾರ ಶಕ್ತಿಯಿದೆ ಯೆಂದು ವರ್ಣಿಸಿ, ಬೆಕ್ಕು ದೇವರಿಗಾಗಿ ಮಾಡಿಟ್ಟ ಹವಿಸ್ಸನ್ನು ತಿನ್ನಲಪೇಕ್ಷಿಸಿದಂತೆ, ತಮ್ಮಲ್ಲಿಲ್ಲದ ಸರ್ವೇಶ್ವರತ್ವಾದಿ ಮಹಿಮೆಯು ತಮ್ಮಲ್ಲಿರಬೇಕೆಂದು

ಅಪೇಕ್ಷಿಸಿ, ಪಂಚಭೇದವು, ಚಿಪ್ಪನ್ನು ಕಂಡು ಬೆಳ್ಳಿಯೆಂದು ತಿಳಿಯುವಂತೆ ಕೇವಲ ಭ್ರಾಂತಿಯೆಂದು ಹೇಳುತ್ತ, ಕೊನೆಗೆ ಅಂಧಂತಮಸ್ಸಿನ ದುಃಖವನ್ನು ಭೋಗಿಸುವ ಮಾಯಾವಾದಿಗಳಿಗೆ ಆ ಭ್ರಾಂತಿಯನ್ನೇ ವೃದ್ಧಿಗೊಳಿಸಬೇಕೆಂದು ಪ್ರಾರ್ಥಿಸಿದ್ದಾರೆ. (ಈ ಶ್ಲೋಕಪುರಶ್ಚರಣದಿಂದ ತನ್ನ ಹುಚ್ಚುತನ ಪರಿಹಾರ, ಮತ್ತು ಪರರಿಗೆ ಉನ್ಮಾದ ಪ್ರಾಪ್ತಿಯಾಗುವುದು.) ॥ ೮ ॥

**ಯೇಽಮುಂ ಭಾವಂ ಭಜಂತೇ ಸುರಮುಖಸುಜನಾರಾಧಿತಂ ತೇ ತೃತೀಯಂ ಭಾಸಂತೇ ಭಾಸುರೈಸ್ತೇ ಸಹಚರಚಲಿತೈಶ್ಚಾಮರೈ-ಶ್ಚಾರುವೇಷಾಃ । ವೈಕುಂಠೇ ಕಂಠಲಗ್ನಸ್ಥಿರಶುಚಿವಿಲಸತ್ಕಾಂತಿತಾ-ರುಣ್ಯಲೀಲಾಲಾವಣ್ಯಾಪೂರ್ಣಕಾಂತಾಕುಚಭರಸುಲಭಾಶ್ಲೇಷಹೃ-ಸಮ್ಮೋದಸಾಂದ್ರಾಃ ॥ ೯ ॥**

ಪವನ–ಶ್ರೀಮುಖ್ಯಪ್ರಾಣನೇ ! ಯೇ–ಯಾವ ಜನರು, ಸುರಮುಖಸುಜ-ನಾರಾಧಿತಂ=ಸುರ–ದೇವತೆಗಳೇ, ಮುಖ–ಮುಖ್ಯರಾಗಿರುವ, ಸುಜನ–ಸಜ್ಜನ ರಿಂದ, ಆರಾಧಿತಂ–ಸೇವಿಸಲ್ಪಟ್ಟ, ತೃತೀಯಂ–ಮೂರನೆಯದಾದ, ಅಮುಂ–ಈ, ಭಾವಂ – ಶ್ರೀಮಧ್ವಾವತಾರವನ್ನು, ಭಜಂತೇ–ಸೇವಿಸುತ್ತಾರೆಯೋ, ತೇ–ಆ ಜನರು, ಚಾರುವೇಷಾಃ–ಸುಂದರ ವೇಷವುಳ್ಳವರಾಗಿ, ಭಾಸುರೈಃ–ಪ್ರಕಾಶಿಸುವ, ಸಹಚರಚಲಿತೈಃ=ಸಹಚರ–ಸೇವಕರಿಂದ, ಚಲಿತೈಃ–ಬೀಸಲ್ಪಟ್ಟ, ಚಾಮರೈಃ–ಚಾಮರಗಳಿಂದ, ಕಂಠಲಗ್ನ...ಸಾಂದ್ರಾಃ = ಕಂಠ–ಕುತ್ತಿಗೆಯಲ್ಲಿ, ಲಗ್ನ–ಸಂಬದ್ಧರಾದ, ಸ್ಥಿರ–ನಿಶ್ಚಲವಾದ, ಶುಚಿ–ನಿರ್ಮಲವಾದ, ವಿಲಸತ್–ಪ್ರಕಾಶಿಸುವ, ಕಾಂತಿ – ಪ್ರಕಾಶ, ತಾರುಣ್ಯ–ಯೌವನ, ಲೀಲಾ–ವಿಲಾಸ, ಲಾವಣ್ಯ–ಸೌಂದರ್ಯ— ಇವುಗಳಿಂದ, ಆಪೂರ್ಣ–ಚೆನ್ನಾಗಿ ತುಂಬಿದ, ಕಾಂತಾ–ಸ್ತ್ರೀಯರ, ಕುಚಭರ–ಸ್ತನಮಧ್ಯದ, ಸುಲಭಾಶ್ಲೇಷ–ಪ್ರಯತ್ನವಿಲ್ಲದೆ ದೊರ ಕುವ ಆಲಿಂಗನದಿಂದ, ಜಾತ–ಹುಟ್ಟಿದ, ಸಮ್ಮೋದ–ಶ್ರೇಷ್ಠ ಸಂತೋಷದಿಂದ, ಸಾಂದ್ರಾಃ–ಪೂರ್ಣರಾದವರಾಗಿ, ವೈಕುಂಠೇ–ವೈಕುಂಠವೆಂಬ ವಿಷ್ಣುಲೋಕ ದಲ್ಲಿ, ಭಾಸಂತೇ–ಶೋಭಿಸುತ್ತಾರೆ.

ದೇವತೆಗಳು ಮೊದಲಾದ ಸಜ್ಜನರಿಂದ ಸೇವಿಸಲ್ಪಡುವ ಶ್ರೀಮಧ್ವಾವತಾರ ವನ್ನು ಭಜಿಸುವವರು ವೈಕುಂಠದಲ್ಲಿ ತರುಣಿಯರ ಆಲಿಂಗನದ ಸುಖವನ್ನನು ಭವಿಸುವರು. ಇಂತಹ ಶಾಶ್ವತ ಮೋಕ್ಷಸುಖಭಾಗ್ಯವೇ ಶ್ರೀಗುರುಸೇವಾಫಲ ವೆಂದು ಭಾವ. ಸೇವಕರಿಂದ ಚಾಮರ ಬೀಸಲ್ಪಡುವುದೆಂಬುದರಿಂದ ಮೋಕ್ಷ

ದಲ್ಲಿ ಸೇವ್ಯ ಸೇವಕತ್ವಾದಿ ತಾರತಮ್ಯವು ಇದೆಯೆಂದು ಸೂಚಿತವಾಗಿದೆ. (ಈ ಶ್ಲೋಕಪುರಶ್ಚರಣದಿಂದ ವಶ್ಯಳಾಗದ ರಮಣಿಯೂ ವಶಳಾಗುವಳು.) ॥ ೯ ॥

ಆ ವೈಕುಂಠವನ್ನು ವರ್ಣಿಸುತ್ತಾರೆ:

**ಆನಂದಾನ್ಮಂದಮಂದಾ ದದತಿ ಹಿ ಮರುತಃ ಕುಂದಮಂದಾರ-ನಂದ್ಯಾವರ್ತಾಮೋದಾನ್ ದಧಾನಾ ಮೃದುಪದಮುದಿತೋದ್ಗೀತ-ಕೈಃ ಸುಂದರೀಣಾಮ್ । ವೃಂದೈರಾವಂದ್ಯಮುಕ್ತೇಂದ್ವಹಿಮಗು-ಮದನಾಹೀಂದ್ರದೇವೇಂದ್ರಸೇವ್ಯೇ ಮೌಕುಂದೇ ಮಂದಿರೇಽಸ್ಮಿ-ನ್ನವಿರತಮುದಯನ್ಮೋದಿನಾಂ ದೇವದೇವ ॥ ೧೦ ॥**

ದೇವದೇವ–ದೇವಶ್ರೇಷ್ಠನಾದ ಶ್ರೀವಾಯುದೇವನೆ! ಮೃದುಪದಂ= ಮೃದಂ–ಮಧುರವಾದ, ಪದಂ–ಗಾನದ ಶಬ್ದಗಳುಳ್ಳ, ಉದಿತೋದ್ಗೀತಕೈಃ= ಉದಿತ–ಹೇಳಲ್ಪಟ್ಟ, ಉದ್ಗೀತಕೈಃ–ಉತ್ಕೃಷ್ಟ ಗಾನವುಳ್ಳ, ಸುಂದರೀಣಾಂ–ಚೆಲುವೆಯರ, ವೃಂದೈಃ–ಸಮೂಹಗಳಿಂದ, ಆವಂದ್ಯಮುಕ್ತೇ...ದೇವೇಂದ್ರ-ಸೇವ್ಯೇ = ಆವಂದ್ಯ – ಚೆನ್ನಾಗಿ ಸೇವಿಸಲ್ಪಡುವ, ಮುಕ್ತ – ಮೋಕ್ಷವನ್ನು ಹೊಂದಿದ, ಇಂದು–ಚಂದ್ರ, ಅಹಿಮಗು – ಉಷ್ಣಕಿರಣವುಳ್ಳ ಸೂರ್ಯ, ಮದನ–ಮನ್ಮಥ, ಅಹೀಂದ್ರ–ಸರ್ಪರಾಜನಾದ ಶೇಷ, ದೇವೇಂದ್ರ–ಇಂದ್ರ ಇವರುಗಳಿಂದ, ಸೇವ್ಯೇ–ಸೇವಿಸಲ್ಪಡುವ, ಅಸ್ಮಿನ್–ಈ, ಮೌಕುಂದೇ–ಮೋಕ್ಷವನ್ನೀಯುವ ಶ್ರೀಹರಿಯ ಸಂಬಂಧಿಯಾದ, ಮಂದಿರೇ–ಆವಾಸಸ್ಥಳ ವಾದ ವೈಕುಂಠದಲ್ಲಿ, ಮಂದಮಂದಾಃ–ಮೆಲ್ಲಮೆಲ್ಲನೆ ಚಲಿಸುವ, ಕುಂದಮಂ-ದಾರನಂದ್ಯಾವರ್ತಾನ್=ಕುಂದ–ಮಾರಜಾಜಿಗಳು, ಮಂದಾರ–ಮಂದಾರ ಪುಷ್ಪ ಗಳು, ನಂದ್ಯಾವರ್ತ–ನಂದಿಬಟ್ಟಲು ಮುಂತಾದ ಪುಷ್ಪಗಳ, ಆಮೋದಾನ್–ಪರಿಮಳಗಳನ್ನು, ದಧಾನಾಃ–ಧರಿಸಿದವುಗಳಾದ, ಮರುತಃ–ಗಾಳಿಗಳು, ಅವಿ-ರತಂ–ನಿತ್ಯದಲ್ಲಿಯೂ, ಉದಯನ್ಮೋದಿನಾಂ=ಉದಯತ್–ಉದಯಿಸುವ, ಮೋದಿನಾಂ–ಆನಂದವುಳ್ಳ ಮುಕ್ತರಿಗೆ, ಆನಂದಾನ್–ಸುಖಗಳನ್ನು, ದದತಿ ಹಿ–ಕೊಡುತ್ತವೆ!

ಇಂಪಾಗಿ ಹಾಡುವ ಸ್ತ್ರೀಯರಿಂದ ಸೇವಿಸಲ್ಪಟ್ಟ ಮುಕ್ತರಾದ ಶೇಷಾದಿ ದೇವತೆಗಳಿಂದ ಕೂಡಿದ ವೈಕುಂಠದಲ್ಲಿ ಪುಷ್ಪಪರಿಮಳಭರಿತಗಳಾದ ಮೆಲ್ಲಗೆ ಬೀಸುವ ಗಾಳಿಗಳು ಆನಂದಮಯರಾದ ಮುಕ್ತರನ್ನು ಆನಂದಗೊಳಿಸುವುವು. ಮುಕ್ತರು ಇಂತಹ ಸುಖಮಯವಾದ ವೈಕುಂಠದಲ್ಲಿ ಶೋಭಿಸುವರು. (ಈ ಶ್ಲೋಕಪುರಶ್ಚರಣದಿಂದ ಸಂತಾನಲಾಭ, ಸುಖಲಾಭ.) ॥ ೧೦ ॥

ಶ್ರೀಮಧ್ವಾಚಾರ್ಯರಲ್ಲಿ ಭಕ್ತಿ ಮಾಡಿದವರಿಗಾಗುವ ಸದ್ಗತಿಯನ್ನು ಹಿಂದಿನ ಶ್ಲೋಕಗಳಲ್ಲಿ ವರ್ಣಿಸಿ, ದ್ವೇಷಿಗಳಿಗಾಗುವ ದುರ್ಗತಿಯನ್ನು ಹೇಳುತ್ತಾರೆ:

**ಉತ್ತಪ್ತಾತ್ಯುತ್ಕಟತ್ವಿಟ್ಪ್ರಕಟಕಟಕಟಧ್ವಾನಸಂಘಟ್ಟನೋ-ದ್ಯದ್ವಿದ್ಯುದ್ವ್ಯೂಢಸ್ಫುಲಿಂಗಪ್ರಕರವಿಕಿರಣೋತ್ಕ್ವಾಥಿತೇ ಬಾಧಿ-ತಾಂಗಾನ್ । ಉದ್ಗಾಢಂ ಪಾತ್ಯಮಾನಾ ತಮಸಿ ತತ ಇತಃ ಕಿಂಕರೈಃ ಪಂಕಿಲೇ ತೇ ಪಂಕ್ತಿರ್ಗ್ರಾವ್ಣಾಂ ಗರಿಮ್ಣಾ ಗ್ಲಪಯತಿ ಹಿ ಭವದ್ದ್ವೇಷಿಣೋ ವಿದ್ವದಾದ್ಯ ॥ ೧೧ ॥**

ವಿದ್ವದಾದ್ಯ – ವಿದ್ವಾಂಸರಿಗೆ ಮೊದಲನೆಯವರಾದ ಶ್ರೀಮಧ್ವಗುರು ಗಳೇ ! ಉತ್ತಪ್ತಾತ್ಯುತ್ಕಟತ್ವಿಟ್ =ಉತ್ತಪ್ತಾ–ಚೆನ್ನಾಗಿ ಕಾಣಿಸಲ್ಪಟ್ಟ, ಅತ್ಯು-ತ್ಕಟ–ಅತ್ಯಂತ ಕ್ರೂರವಾದ, ತ್ವಿಟ್–ಕಾಂತಿಯುಳ್ಳ, ತೇ–ನಿಮ್ಮ, ಕಿಂಕರೈಃ–ಸೇವಕರಿಂದ, ತತ ಇತಃ–ಅತ್ತಿತ್ತ (ಸುತ್ತಲೂ), ಉದ್ಗಾಢಂ–ಬಹು ದೃಢವಾಗಿ, ಪಾತ್ಯಮಾನಾ–ಬಿಸುಡಲ್ಪಡುವ, ಗ್ರಾವ್ಣಾಂ–ಕಲ್ಲುಗಳ, ಪಂಕ್ತಿಃ–ಪರಂಪರೆಯು, ಪ್ರಕಟಕಟ...ಕ್ವಾಥಿತೇ=ಪ್ರಕಟ–ಸ್ಪಷ್ಟವಾದ, ಕಟಕಟಧ್ವಾನ–ಕಟಕಟವೆಂಬ ಶಬ್ದ ವುಳ್ಳ, ಸಂಘಟ್ಟನ–ತಿಕ್ಕಾಟದಿಂದ (ಅಥವಾ ಕಟಕಟಧ್ವನಿಯ ಗಲಭೆಯಿಂದ), ಉದ್ಯತ್–ಹುಟ್ಟಿದ, ವಿದ್ಯುತ್–ಕಾಂತಿಗಳುಳ್ಳ, ವ್ಯೂಢ–ರಾಶಿಯಾಗಿರುವ, ಸ್ಫುಲಿಂಗ–ಬೆಂಕಿ ಕಿಡಿಗಳ (ಅಥವಾ ಉದ್ಯತ್–ಹುಟ್ಟಿದ, ವಿದ್ಯುತ್–ಮಿಂಚು ಗಳಂತಿರುವ ಪುಡಿಯಾದ ಸುಡಲ್ಪಟ್ಟ ಕಲ್ಲಿನ ಚೂರುಗಳ), ಪ್ರಕರ–ಸಮೂಹದ, ವಿಕಿರಣ–ಚೆಲ್ಲುವಿಕೆಯಿಂದ, ಉತ್ಕ್ವಾಥಿತೇ–ಚೆನ್ನಾಗಿ ಸುಡಲ್ಪಟ್ಟ, ಪಂಕಿಲೇ–ಕೆಸ ರುಳ್ಳ, ತಮಸಿ–ಅಂಧಂತಮಸ್ಸೆಂಬ ಮಹಾನರಕದಲ್ಲಿ, ಬಾಧಿತಾಂಗಾನ್= ಬಾಧಿತ–ಪೀಡಿಸಲ್ಪಟ್ಟ, ಅಂಗಾನ್–ಅವಯವಗಳುಳ್ಳ, ಭವದ್ದ್ವೇಷಿಣಃ= ಭವತ್–ನಿಮ್ಮಲ್ಲಿ, ದ್ವೇಷಿಣಃ–ದ್ವೇಷವುಳ್ಳ ದುಷ್ಟರನ್ನು, ಗರಿಮ್ಣಾ–ಭಾರ ದಿಂದ, ಗ್ಲಪಯತಿ–ಬಳಲಿಸುತ್ತದೆ.

ಶ್ರೀಮದಾಚಾರ್ಯರಲ್ಲಿ ದ್ವೇಷ ಮಾಡುವವರನ್ನು, ಅಂಧಂತಮಸ್ಸಿನಲ್ಲಿ ದೂಡಿ, ದೊಡ್ಡ ಕಲ್ಲುಗಳನ್ನು ಬಿಸುಡುವಾಗ ಅದರಿಂದ ಹುಟ್ಟಿದ ಬೆಂಕಿಯ ಜ್ವಾಲೆಯಿಂದ ಅವರ ಕೈಕಾಲು ಮೊದಲಾದ ಅಂಗಗಳನ್ನು ಆಚಾರ್ಯರ ಸೇವ ಕರು ಪೀಡಿಸಿ ಬಳಲಿಸುತ್ತಾರೆ, ಗುರುದ್ವೇಷಿಗಳಿಗೆ ಕುದಿಯುವ ಕೆಸರಿನ ಭಯಂ ಕರವಾದ ನಿತ್ಯನರಕ, ಮೇಲಿನಿಂದ ಕಲ್ಲಿನ ಮಳೆ, ಇಂತಹ ಸಂಕಷ್ಟವನ್ನು ನಿತ್ಯ ದಲ್ಲಿಯೂ ಅನುಭವಿಸಬೇಕಾಗುವುದು. (ಈ ಶ್ಲೋಕಪುರಶ್ಚರಣದಿಂದ ಶತ್ರು ಜಯ ಸಿದ್ಧಿ.) ॥ ೧೧ ॥

ಹೀಗೆ ದ್ವೇಷಿಗಳಿಗೆ ನಿತ್ಯನರಕವನ್ನು ಹೇಳಿ, ಆಚಾರ್ಯರ ಅನುಗ್ರಹವನ್ನು ಅಪೇಕ್ಷಿಸಿ ಬಂದ ವನಾದರೂ ವಿಹಿತಾಚರಣೆಯಲ್ಲಿ ಉದಾಸೀನನಾಗಿದ್ದರೆ ಆತನಿಗೆ ಸಂಸಾರದಿಂದ ಬಿಡುಗಡೆಯಿಲ್ಲ ವೆನ್ನುತ್ತಾರೆ:

**ಅಸ್ಮಿನ್ನಸ್ಮದ್ಗುರೂಣಾಂ ಹರಿಚರಣಚಿರಧ್ಯಾನಸನ್ಮಂಗಲಾನಾಂ ಯುಷ್ಮಾಕಂ ಪಾರ್ಶ್ವಭೂಮಿಂ ಧೃತರಣರಣಿಕಸ್ಸ್ವರ್ಗಿಸೇವ್ಯಾಂ ಪ್ರಪನ್ನಃ । ಯಸ್ತೂದಾಸ್ತೇ ಸ ಆಸ್ತೇಽಧಿಭವಮಸುಲಭಕ್ಲೇಶನಿರ್ಮೋಕಮಸ್ತಪ್ರಾಯಾನಂದಂ ಕಥಂಚಿನ್ನ ವಸತಿ ಸತತಂ ಪಂಚಕಷ್ಟೇಽತಿಕಷ್ಟೇ ॥ ೧೨ ॥**

ಅಸ್ಮದ್ಗುರೂಣಾಂ–ನಮ್ಮ ಗುರುಗಳಾದ, ಹರಿಚರಣಚಿರಧ್ಯಾನಸನ್ಮಂಗಲಾನಾಂ=ಹರಿ–ಶ್ರೀನಾರಾಯಣನ, ಚರಣ–ಪಾದಗಳ, ಚಿರಧ್ಯಾನ–ನಿರಂತರ ಧ್ಯಾನದಿಂದ, ಸತ್–ಶ್ರೇಷ್ಠವಾದ, ಮಂಗಲಾನಾಂ–ಸೌಭಾಗ್ಯವುಳ್ಳ, ಯುಷ್ಮಾಕಂ–ನಿಮ್ಮ, ಸ್ವರ್ಗಿಸೇವ್ಯಾಂ=ಸ್ವರ್ಗಿ–ಸ್ವರ್ಗವುಳ್ಳ ದೇವತೆಗಳೇ ಮೊದಲಾದ ಮನುಷ್ಯೋತ್ತಮಾಂತ ಜೀವರಿಂದ, ಸೇವ್ಯಾಂ–ಸೇವಿಸಲ್ಪಡುವ, ಪಾರ್ಶ್ವಭೂಮಿಂ–ಸಮೀಪಪ್ರದೇಶವನ್ನು, ಅಸ್ಮಿನ್–ಈ ಲೋಕದಲ್ಲಿ,ಧೃತರಣರಣಿಕಃ=ಧೃತ–ಧರಿಸಲ್ಪಟ್ಟ, ರಣರಣಿಕಃ–ಅತ್ಯಭಿಲಾಷೆಯುಳ್ಳ, ಯಃ–ಯಾವ ಮನುಷ್ಯನು, ಪ್ರಪನ್ನಃ–ಶರಣಾಗತನಾಗಿದ್ದರೂ, ಉದಾಸ್ತೇ–(ಆ ಮೇಲೆ)ಉಪೇಕ್ಷಿಸುತ್ತಾನೋ, ಸಃ–ಆ ಮನುಷ್ಯನು, ಅಸುಲಭಕ್ಲೇಶನಿರ್ಮೋಕಂ=ಅಸುಲಭ–ದುರ್ಲಭವಾದ, ಕ್ಲೇಶನಿರ್ಮೋಕಂ–ದುಃಖಪರಿತ್ಯಾಗವುಳ್ಳದ್ದಾಗಿ, ಅಸ್ತಪ್ರಾಯಾನಂದಂ = ಅಸ್ತಪ್ರಾಯ–ಹೆಚ್ಚಾಗಿ ಇಲ್ಲದಂತಾದ, ಆನಂದ–ಸಂತೋಷವುಳ್ಳದ್ದಾಗಿ, ಅಧಿಭವಂ–ಸಂಸಾರದಲ್ಲಿ, ಸತತಂ–ನಿತ್ಯದಲ್ಲಿ, ಆಸ್ತೇ–ಇರುತ್ತಾನೆ.

ಅತಿಕಷ್ಟೇ–ಅತ್ಯಂತ ದುಃಖಕರವಾದ, ಪಂಚಕಷ್ಟೇ=ಪಂಚ–ರೌರವಾದಿ ಐದು ಮಹಾ ನರಕಗಳಿಗಿಂತಲೂ, ಕಷ್ಟೇ–ಕಷ್ಟರೂಪವಾದ ಅಂಧಂತಮಸ್ಸೆಂಬ ನಿತ್ಯ ನರಕದಲ್ಲಿ, ಕಥಂಚಿತ್–ಯಾವ ರೀತಿಯಿಂದಲೂ, ನ ವಸತಿ–ಆವಾಸಮಾಡುವುದಿಲ್ಲ.

ಮೋಕ್ಷಸುಖಲಾಭಕ್ಕಾಗಿ ದೇವತೆಗಳೇ ಮೊದಲಾದ ಮನುಷ್ಯೋತ್ತಮ ಪರ್ಯಂತ ಉತ್ತಮ ಜೀವರು ಸೇವಿಸುವ ಶ್ರೀಮದಾಚಾರ್ಯರ ಬಳಿಯನ್ನು ಸೇವಿಸಿದರೂ ಅವರ ಸಿದ್ಧಾಂತದಲ್ಲಿ ಹೇಳಿದಂತೆ ನಡೆಯದೆ ಉದಾಸೀನನಾಗಿರ ತಕ್ಕವನು ಸ್ವಲ್ಪ ಸುಖವೂ ಹೆಚ್ಚಿನ ದುಃಖವೂ ಇರುವ ಸಂಸಾರದಲ್ಲಿಯೇ ಇರುತ್ತಾನಲ್ಲದೆ, ಹರಿದ್ವೇಷಾದಿಗಳನ್ನು ಮಾಡಿದ ಅಧಮ ಜೀವರಿಗೆ ದೊರಕುವ

ಅಂಧಂತಮಸ್ಸಿನಲ್ಲಿ ಬೀಳಲಾರನು. (ಗುರುಗಳನ್ನು ಮರೆಹೊಕ್ಕು ತತ್ತ್ವಜ್ಞಾನ ವನ್ನು ಗಳಿಸದ ಮಧ್ಯಮ ಜೀವನು ನಿತ್ಯಸಂಸಾರಿಯಾಗುವನಲ್ಲದೆ, ಅಸುರರಿಗಾ ಗುವ ತಮಸ್ಸನ್ನು ಹೊಂದಲಾರನೆಂದು ನಿತ್ಯಸಂಸಾರಿಯ ಗತಿಯನ್ನು ವಿವರಿಸಿ ದ್ದಾರೆ.) (ಈ ಶ್ಲೋಕಪುರಶ್ಚರಣದಿಂದ ಕ್ಲೇಶಪರಿಹಾರ, ಹರಿಭಕ್ತಿಸಿದ್ಧಿ.) ॥೧೨॥

ಅಸುರರಿಗಾಗುವ ಅಂಧಂತಮಸ್ಸಿನ ದುಃಖವನ್ನು ಹೇಳುತ್ತಾರೆ:

**ಕ್ಷುತ್‌ಕ್ಷಾಮಾನ್ ರೂಕ್ಷರಕ್ಷೋರದಖರನಖರಕ್ಷುಣ್ಣವಿಕ್ಷೋಭಿತಾಕ್ಷಾನಾಮಗ್ನಾನಂಧಕೂಪೇ ಕ್ಷುರಮುಖಮುಖರೈಃ ಪಕ್ಷಿಭಿರ್ವಿಕ್ಷತಾಂಗಾನ್ । ಪೂಯಾಸೃಙ್‌ಮೂತ್ರವಿಷ್ಠಾಕ್ರಿಮಿಕುಲಕಲಿಲೇ ತತ್‌ಕ್ಷಣಕ್ಷಿಪ್ತಶಕ್ತ್ಯಾದ್ಯಸ್ತ್ರವ್ರಾತಾರ್ದಿತಾಂಸ್ತ್ವದ್ದ್ವಿಷ ಉಪಜಿಹತೇ ವಜ್ರಕಲ್ಪಾ ಜಲೂಕಾಃ ॥ ೧೩ ॥**

ಕ್ಷುತ್‌ಕ್ಷಾಮಾನ್=ಕ್ಷುತ್-ಹಸಿವಿನಿಂದ, ಕ್ಷಾಮಾನ್-ಕ್ಷೀಣರಾದ, ರೂಕ್ಷರಕ್ಷೋ...ಕ್ಷೋಭಿತಾನ್=ರೂಕ್ಷ-ಕ್ರೂರರಾದ, ರಕ್ಷಃ-ರಾಕ್ಷಸರ, ರದ-ಹಲ್ಲು ಗಳು, ಖರನಖರ-ತೀಕ್ಷ್ಣ ಉಗುರುಗಳು ಇವುಗಳಿಂದ, ಕ್ಷುಣ್ಣ-ಪುಡಿ ಮಾಡ ಲ್ಪಟ್ಟ, ವಿಕ್ಷೋಭಿತ-ಚೆನ್ನಾಗಿ ಪೀಡಿಸಲ್ಪಟ್ಟ, ಅಕ್ಷಾನ್ - ಕಣ್ಣುಗಳುಳ್ಳ, ಪೂಯಾಸೃಙ್...ಕುಲಕಲಿಲೇ = ಪೂಯ-ಕೀವು, ಅಸೃಕ್-ರಕ್ತ, ಮೂತ್ರ-ಮೂತ್ರ, ವಿಷ್ಠಾ-ಮಲ, ಕ್ರಿಮಿಕುಲ-ಹುಳುಗಳ ಸಮೂಹ— ಇವುಗಳಿಂದ, ಕಲಿಲೇ-ಮಿಶ್ರಿತವಾದ, ಅಂಧಕೂಪೇ-ಅಂಧಂತಮಸ್ಸೆಂಬ ಬಾವಿಯಲ್ಲಿ, ಆಮಗ್ನಾನ್-ಪೂರ್ತಿ ಮುಳುಗಿದ, ಕ್ಷುರಮುಖಮುಖರೈಃ = ಕ್ಷುರ-ಕ್ಷೌರಕತ್ತಿ ಯಂತೆ, ಮುಖ-ಬಾಯಿಯುಳ್ಳ, ಮುಖರೈಃ-ಶಬ್ದ ಮಾಡುವ, ಪಕ್ಷಿಭಿಃ-ಕಾಗೆ ಹದ್ದು ಮೊದಲಾದ ಹಕ್ಕಿಗಳಿಂದ, ವಿಕ್ಷತಾಂಗಾನ್-ಸೀಳಲ್ಪಟ್ಟ ಅವಯವವುಳ್ಳ, ತತ್‌ಕ್ಷಣಕ್ಷಿಪ್ತ...ರ್ದಿತಾನ್=ತತ್‌ಕ್ಷಣ-ಆ ಕ್ಷಣದಲ್ಲಿ, ಕ್ಷಿಪ್ತ-ಎಸೆಯಲ್ಪಟ್ಟ, ಶಕ್ತ್ಯಾದ್ಯಸ್ತ್ರವ್ರಾತ-ಶಕ್ತಿಯೆಂಬ ಆಯುಧವೇ ಮೊದಲಾದ ಅಸ್ತ್ರಗಳ ಸಮೂಹ ದಿಂದ, ಅರ್ದಿತಾನ್-ಪೀಡಿಸಲ್ಪಟ್ಟ, ತ್ವದ್ದ್ವಿಷಃ-ನಿನ್ನ ದ್ವೇಷಿಗಳನ್ನು, ವಜ್ರಕಲ್ಪಾಃ-ವಜ್ರದಂತಿರುವ, ಜಲೂಕಾಃ-ಜಿಗಳೆಗಳು, ಉಪಜಿಹತೇ-ಬಳಿ ಸಾರು ತ್ತವೆ. (ಸಮೀಪಿಸಿ ರಕ್ತವನ್ನು ಹೀರುತ್ತವೆ.)

ವಾಯುದೇವರ ದ್ವೇಷಿಗಳು ಕೀವು ರಕ್ತ ಮೊದಲಾದ ಕೊಳೆತ ವಸ್ತುಗಳಿಂದ ತುಂಬಿದ ತಮಸ್ಸಿನಲ್ಲಿ ಬಿದ್ದು, ಹಸಿವಿನಿಂದ ಕೃಶರಾಗಿ ಕಾಗೆ ಹದ್ದುಗಳಿಂದ ಕಚ್ಚ ಲ್ಪಟ್ಟು, ಕ್ರೂರ ರಾಕ್ಷಸರ ಹಲ್ಲು ಉಗುರುಗಳಿಂದ ಕಣ್ಣು ಕೀಳಲ್ಪಟ್ಟು, ವಜ್ರ

ದಂತಹ ಜಿಗಳೆಗಳಿಂದ ಕಡಿಯಲ್ಪಡುವಂತಹ (ಅಂಧಂತಮಸ್ಸಿನ ಕಷ್ಟವನ್ನು) ಅತಿ ಕಷ್ಟವನ್ನು ಅನುಭವಿಸುವರು. (ಈ ಶ್ಲೋಕಪುರಶ್ಚರಣದಿಂದ ದಾರಿದ್ರ್ಯ ಪರಿಹಾರ ಮತ್ತು ಶತ್ರುಮೋಹನ.) ॥ ೧೩ ॥

'ಮೂರ್ಧನ್ಯೇಷೋಽಂಜಲಿಃ' ಎಂಬ ಶ್ಲೋಕದಲ್ಲಿ ಬೇಡಿದ ಭಕ್ತಿಯನ್ನೇ ಈ ಶ್ಲೋಕದಲ್ಲಿ ವಿಶೇಷವಾಗಿ ಪ್ರಾರ್ಥಿಸುತ್ತಾರೆ:

**ಮಾತರ್ಮೇ ಮಾತರಿಶ್ವನ್ ಪಿತರತುಲಗುರೋ ಭ್ರಾತರಿಷ್ಟಾಪ್ತ-ಬಂಧೋ ಸ್ವಾಮಿನ್ ಸರ್ವಾಂತರಾತ್ಮನ್ನಜರ ಜರಯಿತರ್ಜನ್ಮ-ಮೃತ್ಯಾಮಯಾನಾಮ್ । ಗೋವಿಂದೇ ದೇಹಿ ಭಕ್ತಿಂ ಭವತಿ ಚ ಭಗವನ್ನೂರ್ಜಿತಾಂ ನಿರ್ನಿಮಿತ್ತಾಂ ನಿರ್ವ್ಯಾಜಾಂ ನಿಶ್ಚಲಾಂ ಸದ್ಗು-ಣಗಣಬೃಹತೀಂ ಶಾಶ್ವತೀಮಾಶು ದೇವ ॥ ೧೪ ॥**

ಮಾತಃ–ತಾಯಿಯೇ ! ಪಿತಃ–ತಂದೆಯೇ ! ಅತುಲಗುರೋ–ಅಸದೃಶನಾದ ಗುರುವೇ! ಭ್ರಾತಃ–ಅಣ್ಣನೇ! ಇಷ್ಟ–ಪ್ರಿಯನೇ! ಆಪ್ತಬಂಧೋ–ಆಪ್ತನಾದ ಬಂಧುವೇ! ಸ್ವಾಮಿನ್–ಪ್ರಭುವೇ! ಸರ್ವಾಂತರಾತ್ಮನ್–ಎಲ್ಲರ ಅಂತರ್ಯಾಮಿಯಾದವನೇ! ಅಜರ–ಮುದಿತನವಿಲ್ಲದವನೇ ! ಜನ್ಮಮೃತ್ಯಾಮಯಾನಾಂ= ಜನ್ಮ–ಹುಟ್ಟುವುದು, ಮೃತಿ – ಮರಣ, ಆಮಯಾನಾಂ – ರೋಗ— ಇವುಗಳನ್ನು, ಜರಯಿತಃ–ನಾಶಮಾಡತಕ್ಕವನೇ ! ಭಗವನ್–ಷಡ್ಗುಣೈಶ್ವರ್ಯ ಪರಿಪೂರ್ಣನೇ! ದೇವ–ಎಲ್ಲೈ ಕ್ರೀಡಾದಿಗುಣವಿಶಿಷ್ಟನೇ! ಮಾತರಿಶ್ವನ್–ಮುಖ್ಯಪ್ರಾಣನೇ! ಮೇ–ನನಗೆ, ಊರ್ಜಿತಾಂ–ಅಭಿವೃದ್ಧವಾದ, ನಿರ್ನಿಮಿತ್ತಾಂ–ಹೇತುವಿಲ್ಲದ, ನಿರ್ವ್ಯಾಜಾಂ–ಕಪಟವಿಲ್ಲದ, ನಿಶ್ಚಲಾಂ–ಚಲಿಸದಿರುವ [ಸ್ಥಿರವಾದ], ಸದ್ಗುಣಗಣಬೃಹತೀಂ=ಸತ್–ಶ್ರೇಷ್ಠವಾದ, ಗುಣ–ವೈರಾಗ್ಯಾದಿ ಗುಣಗಳ, ಗಣ–ಸಮೂಹದಿಂದ, ಬೃಹತೀಂ–ಮಹತ್ತಾದ, ಶಾಶ್ವತೀಂ–ನಿತ್ಯವಾದ, ಭಕ್ತಿಂ–ಮಾಹಾತ್ಮ್ಯಜ್ಞಾನಪೂರ್ವಕಸುದೃಢಸ್ನೇಹವನ್ನು, ಗೋವಿಂದೇ–ಶ್ರೀಕೃಷ್ಣನಲ್ಲಿ, ಭವತಿ ಚ–ನಿನ್ನಲ್ಲಿಯೂ ಕೂಡ, ಆಶು–ಬೇಗನೆ, ದೇಹಿ–ಕೊಡು.

ತಾಯಿ ತಂದೆ ಸೋದರ ಗುರು ಮಿತ್ರ ಆಪ್ತಬಂಧು ಸ್ವಾಮಿ ಮೊದಲಾದವರಂತೆ ಸರ್ವಾಂತರ್ಯಾಮಿಯಾಗಿ ಪೊರೆಯುವವನೂ ಹಿತೋಪದೇಶಕನೂ ಇಷ್ಟಾರ್ಥದಾತನೂ ಆದ ಶ್ರೀವಾಯುದೇವನೇ! ದೃಢಭಕ್ತಿಯನ್ನು ಕೊಡು. (ಈ ಶ್ಲೋಕಪುರಶ್ಚರಣದಿಂದ ಪಿತೃಮಾತೃಭಕ್ತಿ ಮತ್ತು ಜನವಶೀಕರಣಸಿದ್ಧಿ.) ॥ ೧೪ ॥

ಸಕಲ ಪುರುಷಾರ್ಥಸಾಧಕವಾದ ಹರಿಗುರುಭಕ್ತಿಯನ್ನು ಆಚರಿಸುವ ಕ್ರಮವನ್ನೂ ಅದರ ಫಲವನ್ನೂ ವಿವರಿಸುತ್ತಾರೆ:

**ವಿಷ್ಣೋರತ್ಯುತ್ತಮತ್ವಾದಖಿಲಗುಣಗಣೈಸ್ತತ್ರ ಭಕ್ತಿಂ ಗರಿಷ್ಠಾ-ಮಾಶ್ಲಿಷ್ಟೇ ಶ್ರೀಧರಾಭ್ಯಾಮಮುಮಥ ಪರಿವಾರಾತ್ಮನಾ ಸೇವ-ಕೇಷು । ಯಃ ಸಂಧತ್ತೇ ವಿರಿಂಚಶ್ವಸನವಿಹಗಪಾನಂತರುದ್ರೇಂದ್ರ-ಪೂರ್ವೇಷ್ವಾಧ್ಯಾಯಂಸ್ತಾರತಮ್ಯಂ ಸ್ಫುಟಮವತಿ ಸದಾ ವಾಯು-ರಸ್ಮದ್ಗುರುಸ್ತಮ್ ॥ ೧೫ ॥**

ಯಃ—ಯಾವನು, ಅಖಿಲಗುಣಗಣೈಃ=ಅಖಿಲ—ಸಮಸ್ತ, ಗುಣ—ಸ್ವತಂತ್ರತ್ವ ಸರ್ವಜ್ಞತ್ವ ಮೊದಲಾದ ಶುಭಗುಣಗಳ, ಗಣೈಃ—ಸಮೂಹದಿಂದ, ವಿಷ್ಣೋಃ—ಶ್ರೀನಾರಾಯಣನಿಗೆ, ಅತ್ಯುತ್ತಮತ್ವಾತ್—ಅತ್ಯಂತ ಶ್ರೇಷ್ಠತ್ವವಿರುವ ದೆಸೆಯಿಂದ, ಅಥ—ಅನಂತರದಲ್ಲಿ, ಅಮುಂಪ್ರತಿ—ವಿಷ್ಣುವನ್ನು ಕುರಿತು, ಪರಿವಾ-ರಾತ್ಮನಾ—ಪರಿವಾರಸ್ವರೂಪದಿಂದ, ಸೇವಕೇಷು—ಸೇವಿಸುವ. ವಿರಿಂಚಶ್ವಸನ-...ಪೂರ್ವೇಷು = ವಿರಿಂಚ—ಬ್ರಹ್ಮ, ಶ್ವಸನ—ಮುಖ್ಯಪ್ರಾಣ, ವಿಹಗಪ—ಗರುಡ, ಅನಂತ—ಶೇಷ, ರುದ್ರ—ಶಿವ, ಇಂದ್ರ—ದೇವೇಂದ್ರ, ಇವರೇ, ಪೂರ್ವೇಷು—ಮುಖ್ಯರಾಗಿರುವವರಲ್ಲಿ, ತಾರತಮ್ಯಂ—ಹೆಚ್ಚು ಕಡಿಮೆಯನ್ನು, ಆಧ್ಯಾಯನ್(ಸನ್)—ಚಿಂತಿಸುವವನಾಗಿ, ಶ್ರೀಧರಾಭ್ಯಾಂ—ಲಕ್ಷ್ಮೀ-ಭೂದೇವಿಯರಿಂದ, ಆಶ್ಲಿಷ್ಟೇ—ಆಲಿಂಗಿಸಲ್ಪಟ್ಟ, ತತ್ರ—ಆ ವಿಷ್ಣುವಿನಲ್ಲಿ, ಗರಿಷ್ಠಾಂ—ಮಹತ್ತಾದ, ಭಕ್ತಿಂ—ಮಾಹಾತ್ಮ್ಯಜ್ಞಾನಪೂರ್ವಕ ಸುದೃಢಸ್ನೇಹವನ್ನು, ಸಂಧತ್ತೇ—ಚೆನ್ನಾಗಿ ಧರಿಸುತ್ತಾನೋ, ತಂ—ಆ ವಿಷ್ಣುಭಕ್ತನನ್ನು, ಅಸ್ಮದ್ಗುರುಃ—ನಮ್ಮ ಗುರುವಾದ, ವಾಯುಃ—ವಾಯುದೇವನು, ಸ್ಫುಟಂ—ಸ್ಪಷ್ಟವಾಗಿ, ಸದಾ—ನಿತ್ಯದಲ್ಲಿಯೂ, ಅವತಿ—ರಕ್ಷಿಸುತ್ತಾನೆ.

ಬ್ರಹ್ಮ-ವಾಯು-ಗರುಡಾದಿ ದೇವತೆಗಳಲ್ಲಿ ತಾರತಮ್ಯವನ್ನು ತಿಳಿದು, ಸರ್ವೋತ್ತಮನಾದ ಶ್ರೀಹರಿಯಲ್ಲಿ ದೃಢಭಕ್ತಿಯನ್ನಿಟ್ಟವನನ್ನು ಶ್ರೀಮುಖ್ಯಪ್ರಾಣನು ಕಾಪಾಡುತ್ತಾನೆ. (ಅವರವರ ತಾರತಮ್ಯವನ್ನರಿತು, ಹರಿಯೇ ಸರ್ವೋತ್ತಮನೆಂದು ಉಪಾಸನೆ ಮಾಡುತ್ತಾ ದೃಢಭಕ್ತಿಯನ್ನಿಡಬೇಕೆಂದು ಹೇಳಿ, ಭಕ್ತಿಯ ಆಚರಣಕ್ರಮವನ್ನೂ, ವಾಯುದೇವರು ರಕ್ಷಿಸುವರೆಂದು ಭಕ್ತಿಯ ಫಲವನ್ನೂ ವಿವರಿಸಿದ್ದಾರೆ.) (ಈ ಶ್ಲೋಕಪುರಶ್ಚರಣದಿಂದ ಹರಿಭಕ್ತಿ ಸಿದ್ಧಿ.) ॥ ೧೫ ॥

**ತತ್ತ್ವಜ್ಞಾನ್ ಮುಕ್ತಿಭಾಜಃ ಸುಖಯಸಿ ಹಿ ಗುರೋ ಯೋಗ್ಯ-ತಾತಾರತಮ್ಯಾದಾಧತ್ಸೇ ಮಿಶ್ರಬುದ್ಧೀಂಸ್ತ್ರಿದಿವನಿರಯಭೂಗೋ-ಚರಾನ್ನಿತ್ಯಬದ್ಧಾನ್। ತಾಮಿಸ್ರಾಂಧಾದಿಕಾಖ್ಯೇ ತಮಸಿ ಸುಬಹು-ಲಂ ದುಃಖಯಸ್ಯನ್ಯಥಾಜ್ಞಾನ್ ವಿಷ್ಣೋರಾಜ್ಞಾಭಿರಿತ್ಥಂ ಶ್ರುತಿ-ಶತಮಿತಿಹಾಸಾದಿ ಚಾಽಕರ್ಣಯಾಮಃ ॥ ೧೬ ॥**

ಗುರೋ–ಗುರುಉತ್ತಮನಾದ ಶ್ರೀಮುಖ್ಯಪ್ರಾಣನೇ ! ವಿಷ್ಣೋಃ–ಶ್ರೀ ಹರಿಯ, ಆಜ್ಞಾಭಿಃ–ಅಪ್ಪಣೆಯಿಂದ, ತತ್ತ್ವಜ್ಞಾನ್–ಪರಾಪರವಸ್ತುವನ್ನರಿತ ಉತ್ತಮ ಜೀವರನ್ನು, ಮುಕ್ತಿಭಾಜಃ–ಮೋಕ್ಷವನ್ನು ಹೊಂದಿದವರನ್ನು ಮಾಡಿ, ಯೋಗ್ಯತಾತಾರತಮ್ಯಾತ್–ಯೋಗ್ಯತೆಯ ಹೆಚ್ಚುಕಡಿಮೆಯ ದೆಸೆಯಿಂದ, ಸುಖಯಸಿ–ಆನಂದಪಡಿಸುತ್ತೀ, ಮಿಶ್ರಬುದ್ಧೀನ್ – ಜ್ಞಾನ-ಅಜ್ಞಾನಗಳಿಂದ ಮಿಶ್ರಿತವಾದ ಬುದ್ಧಿಯುಳ್ಳ ಮಧ್ಯಮಜೀವರನ್ನು, ನಿತ್ಯಬದ್ಧಾನ್–ನಿತ್ಯದಲ್ಲಿಯೂ ಸಂಸಾರಬಂಧವುಳ್ಳವರನ್ನು ಮಾಡಿ, ತ್ರಿದಿವನಿರಯಭೂಗೋ-ಚರಾನ್=ತ್ರಿದಿವ–ಸ್ವರ್ಗ, ನಿರಯ–ನರಕ, ಭೂ–ಭೂಲೋಕ ಇವುಗಳಲ್ಲಿ, ಗೋಚರಾನ್–ತೋರತಕ್ಕವರನ್ನು, ಆಧತ್ಸೇ–ಮಾಡುತ್ತೀ, ಅನ್ಯಥಾಜ್ಞಾನ್–ಭ್ರಾಂತಿಜ್ಞಾನ (ಇದ್ದ ರೀತಿಗೆ ವ್ಯತ್ಯಾಸವಾಗಿ ತಿಳುವಳಿಕೆ)ವುಳ್ಳ ಅಧಮ ಜೀವರನ್ನು, ತಾಮಿಸ್ರಾಂಧಾದಿಕಾಖ್ಯೇ=ತಾಮಿಸ್ರ–ತಾಮಿಸ್ರ, ಅಂಧ–ಅಂಧತಾಮಿಸ್ರ, ಆದಿಕ–ಮೊದಲಾದ, ಆಖ್ಯೇ–ಹೆಸರುಳ್ಳ, ತಮಸಿ–ನಿತ್ಯನರಕದಲ್ಲಿ, ಸಮ್ಯಕ್–ಚೆನ್ನಾಗಿ, ಸುಬಹುಲಂ–ಬಹಳವಾಗಿ, ದುಃಖಯಸಿ–ದುಃಖಪಡಿಸುತ್ತೀ, ಇತಿ–ಈ ಪ್ರಕಾರ, ಶ್ರುತಿಶತಂ–ನೂರು ವೇದಗಳನ್ನೂ, ಇತಿಹಾಸಾದಿ ಚ–ಭಾರತವೇ ಮೊದಲಾಗಿರುವ ಪುರಾಣವನ್ನೂ, ಆಕರ್ಣಯಾಮಃ–ಕೇಳುತ್ತೇವೆ.

ಶ್ರೀಮುಖ್ಯಪ್ರಾಣನೇ! ಮುಕ್ತಿಯೋಗ್ಯರಾದ ಉತ್ತಮರನ್ನು ತಾರತಮ್ಯಾನುಸಾರ ಅವರವರ ಯೋಗ್ಯತೆಗೆ ತಕ್ಕಂತೆ ಸುಖಪಡಿಸುತ್ತೀ. (ಈ ವಿಷಯದಲ್ಲಿ "ವಾಯುನಾ ಹಿ ಸರ್ವೇ ಲೋಕಾ ನೇನೀಯಂತೇ" ಇತ್ಯಾದಿ ಪ್ರಮಾಣವಚನವನ್ನು ತಿಳಿಯಬೇಕು.) (ಈ ಶ್ಲೋಕಪುರಶ್ಚರಣದಿಂದ ಮೋಕ್ಷ ಸಿದ್ಧಿ.) ॥ ೧೬ ॥

ಮುಂದಿನ ಐದು ಶ್ಲೋಕಗಳಿಂದ ಹನುಮದವತಾರದ ಮಹಿಮೆಯನ್ನು ವರ್ಣಿಸುತ್ತಾರೆ:

**ವಂದೇಽಹಂ ತಂ ಹನೂಮಾನಿತಿ ಮಹಿತಮಹಾಪೌರುಷೋ ಬಾಹುಶಾಲೀ ಖ್ಯಾತಸ್ತೇಽಗ್ರ್ಯೋಽವತಾರಃ ಸಹಿತ ಇಹ ಬಹು-**

**ಬ್ರಹ್ಮಚರ್ಯಾದಿಧರ್ಮೈಃ । ಸಸ್ನೇಹಾನಾಂ ಸಹಸ್ವಾನಹರಹರ-
ಹಿತಂ ನಿರ್ದಹನ್ ದೇಹಭಾಜಾಮಂಹೋಮೋಹಾಪಹೋ ಯಃ
ಸ್ಪೃಹಯತಿ ಮಹತೀಂ ಭಕ್ತಿಮದ್ಯಾಪಿ ರಾಮೇ ॥ ೧೭ ॥**

[ವಾಯೋ–ಶ್ರೀಮುಖ್ಯಪ್ರಾಣನೇ!] ಮಹಿತಮಹಾಪೌರುಷಃ = ಮಹಿತ–ಸನ್ಮಾನಿಸಲ್ಪಟ್ಟ, ಮಹಾಪೌರುಷಃ–ಶ್ರೇಷ್ಠಪರಾಕ್ರಮವುಳ್ಳ, ಬಾಹುಶಾಲೀ–ಭುಜಬಲವುಳ್ಳ, ಬ್ರಹ್ಮಚರ್ಯಾದಿಧರ್ಮೈಃ–ಬ್ರಹ್ಮಚರ್ಯವೇ ಮೊದಲಾದ ಧರ್ಮಗಳಿಂದ, ಸಹಿತಃ–ಕೂಡಿದ, ಸಸ್ನೇಹಾನಾಂ–ಭಕ್ತಿಯಿಂದ ಕೂಡಿದ, ದೇಹಭಾಜಾಂ–ಶರೀರವನ್ನು ಧರಿಸಿದ ಪ್ರಾಣಿಗಳ, ಅಹಿತಂ–ಅನಿಷ್ಟವನ್ನು, ಅಹರಹಃ–ಪ್ರತಿದಿನವೂ. ನಿರ್ದಹನ್ – ಸುಡತಕ್ಕ, ಅಂಹೋಮೋಹಾಪಹಃ = ಅಂಹಃ–ಪಾಪ, ಮೋಹಃ–ಮಿಥ್ಯಾಜ್ಞಾನ(ಭ್ರಾಂತಿ)— ಇವುಗಳನ್ನು,ಅಪಹಃ–ನಾಶಮಾಡತಕ್ಕ, ಸಹಸ್ವಾನ್–ಸಾಮರ್ಥ್ಯವುಳ್ಳ, ಅಗ್ರ್ಯಃ–ಮೊದಲನೆಯ, ಹನೂಮಾನ್–ಹನುಮಂತನು (ಜ್ಞಾನವುಳ್ಳವನು), ಇತಿ–ಎಂದು, ಖ್ಯಾತಃ–ಪ್ರಸಿದ್ಧವಾದ, ತೇ–ನಿನ್ನ, ಯಃ–ಯಾವ, ಅವತಾರಃ–ಅವತಾರವು, ಅದ್ಯಾಪಿ–ಈಗಲೂ ಕೂಡ, ಇಹ–ಈ ಭೂಲೋಕದಲ್ಲಿ, ರಾಮೇ–ಶ್ರೀರಾಮಚಂದ್ರನಲ್ಲಿ, ಮಹತೀಂ–ಅತಿಶ್ರೇಷ್ಠವಾದ, ಭಕ್ತಿಂ–ಮಾಹಾತ್ಮ್ಯಜ್ಞಾನಪೂರ್ವಕ ಸುದೃಢಸ್ನೇಹವನ್ನು, ಸ್ಪೃಹಯತಿ–ಅಪೇಕ್ಷಿಸುತ್ತದೋ, ಅಹಂ–ನಾನು, ತಂ–ಆ ಅವತಾರವನ್ನು, ವಂದೇ–ನಮಸ್ಕರಿಸುತ್ತೇನೆ. (ಸ್ತುತಿಸುತ್ತೇನೆ.)

ಬ್ರಹ್ಮಚಾರಿಯೂ, ಬಲಿಷ್ಠನೂ, ಪರಾಕ್ರಮಿಯೂ ಆದ ಹನುಮಂತನೆನಿಸಿದ ಪ್ರಥಮಾವತಾರವನ್ನು ಧರಿಸಿ, ಭಕ್ತರ ಪಾಪ ಮತ್ತು ಅಜ್ಞಾನಗಳನ್ನು ಪರಿಹರಿಸಿ, ಕಿಂಪುರುಷಖಂಡದಲ್ಲಿ ಈಗಲೂ ಚಿರಂಜೀವಿಯಾಗಿ ಶ್ರೀರಾಮನಲ್ಲಿ ದೃಢಭಕ್ತಿಯನ್ನು ಮಾಡುತ್ತಿರುವ ಮಹಾತ್ಮ ನೀನು. (ಈ ಶ್ಲೋಕಪುರಶ್ಚರಣದಿಂದ ಪರಾಕ್ರಮ ಸಿದ್ಧಿ.) ॥ ೧೭ ॥

**ಪ್ರಾಕ್ ಪಂಚಾಶತ್ಸಹಸ್ರೈರ್ವ್ಯವಹಿತಮಮಿತಂ ಯೋಜನೈಃ
ಪರ್ವತಂ ತ್ವಂ ಯಾವತ್ ಸಂಜೀವನಾದ್ಯೌಷಧನಿಧಿಮಧಿಕಪ್ರಾಣ
ಲಂಕಾಮನೈಷೀಃ । ಅದ್ರಾಕ್ಷೀದುತ್ಪತಂತಂ ತತ ಉತ ಗಿರಿಮು-
ತ್ಪಾಟಯಂತಂ ಗೃಹೀತ್ವಾ ಯಾಂತಂ ಖೇ ರಾಘವಾಂಘ್ರೌ ಪ್ರಣ-
ತಮಪಿ ತದೈಕಕ್ಷಣೇ ತ್ವಾಂ ಹಿ ಲೋಕಃ ॥ ೧೮ ॥**

ಅಧಿಕಪ್ರಾಣ–ಬಲು ಬಲವುಳ್ಳ ಹನುಮಂತನೇ ! ತ್ವಂ–ನೀನು, ಯಾವತ್–

ಯದಾವಾಗ, ಪ್ರಾಕ್–ಪೂರ್ವದಲ್ಲಿ, ಪಂಚಾಶತ್‌ಸಹಸ್ರೈಃ–ಐವತ್ತು ಸಾವಿರ, ಯೋಜನೈಃ – ಯೋಜನಗಳಿಂದ, ವ್ಯವಹಿತಂ – ದೂರವಾಗಿದ್ದ, ಅವಿತಂ–ಮೊದಲು ತಿಳಿಯಲ್ಪಡದ, ಸಂಜೀವನಾದ್ಯೌಷಧನಿಧಿಂ=ಸಂಜೀವನ–ಮೃತ ಸಂಜೀವನವೇ, ಆದಿ–ಮೊದಲಾಗಿರುವ, ಔಷಧ–ಔಷಧಗಳಿಗೆ, ನಿಧಿಂ–ಸ್ಥಾನ ವಾದ, ಪರ್ವತಂ–ಗಂಧಮಾದನಪರ್ವತವನ್ನು, ಲಂಕಾಂ(ಪ್ರತಿ)–ಲಂಕಾಪಟ್ಟಣ ವನ್ನು ಕುರಿತು, ಅನೈಷೀಃ–ಒಯ್ದೆಯೋ, ತದಾ–ಆಗ, ಲೋಕಃ–ಜನವು, ಏಕ-ಕ್ಷಣೇ–ಒಂದು ಕ್ಷಣ ಕಾಲದಲ್ಲಿ, ತತಃ–ಆ ಲಂಕಾಪಟ್ಟಣದಿಂದ, ಉತ್ಪ-ತಂತಂ–ಮೇಲಕ್ಕೆ ಹಾರುವ, ಉತ–ಆ ಮೇಲೆ, ತಂ ಗಿರಿಂ–ಆ ಪರ್ವತವನ್ನು, ಉತ್ಪಾಟಯಂತಂ–ಕೀಳತಕ್ಕ, (ಆ ಮೇಲೆ) ಗಿರಿಂ–ಪರ್ವತವನ್ನು, ಗೃಹೀತ್ವಾ–ಹಿಡಿದುಕೊಂಡು, ಖೇ–ಆಕಾಶದಲ್ಲಿ, ಆಯಾಂತಂ–(ಲಂಕೆಯನ್ನು ಕುರಿತು) ಬರ ತಕ್ಕ, (ಆ ಮೇಲೆ) ರಾಘವಾಂಘ್ರೌ–ಶ್ರೀರಾಮಪಾದದಲ್ಲಿ, ಪ್ರಣತಮಪಿ–ನಮ ಸ್ಕರಿಸತಕ್ಕ, ತ್ವಾಂ–ನಿನ್ನನ್ನು, ಅದ್ರಾಕ್ಷೀತ್–ಕಂಡಿತು.

ಕ್ಷಣಮಾತ್ರದಲ್ಲಿ ಹನುಮಂತನು ಲಂಕಾಪಟ್ಟಣದಿಂದ ಐವತ್ತು ಸಾವಿರ ಯೋಜನ ದೂರವಿದ್ದ ಗಂಧಮಾದನಪರ್ವತಕ್ಕೆ ಹಾರಿ, ಅದನ್ನು ಲಂಕೆಗೆ ತಂದು ಶ್ರೀರಾಮನಿಗೆ ನಮಸ್ಕರಿಸುವುದನ್ನು ಆಗಿನ ಜನ ನೋಡಿದ್ದಾರೆ. (ಇಂತಹ ಅಮಾನುಷವೂ ಅದ್ಭುತವೂ ಆದ ಅಸಾಧ್ಯ ಕಾರ್ಯ ಮಾಡಿದ ಮಹಾತ್ಮನೆಂದು ಸ್ತುತಿಸಿದ್ದಾರೆ.) (ಈ ಶ್ಲೋಕಪುರಶ್ಚರಣದಿಂದ ಔಷಧಸಿದ್ಧಿ.) ॥ ೧೮ ॥

ಅಂತಹ ಅದ್ಭುತ ವ್ಯಾಪಾರವನ್ನು ನೆನೆನೆನೆದು, ಹೊಗಳಿ ಹೊಗಳಿ, ಸಂತುಷ್ಟರಾಗಿ ಹನುಮಂತನ ಜಾಣತನಕ್ಕೆ ನಮಸ್ಕರಿಸುತ್ತಾರೆ:

**ಕ್ಷಿಪ್ತಃ ಪಶ್ಚಾತ್ ಸಲೀಲಂ ಶತಮತುಲಮತೇ ಯೋಜನಾನಾಂ ಸ ಉಚ್ಚಸ್ತಾವದ್ ವಿಸ್ತಾರವಾಂಶ್ಚಾಪ್ಯುಪಲಲವ ಇವ ವ್ಯಗ್ರಬುದ್ಧ್ಯಾ ತ್ವಯಾತಃ । ಸ್ವಸ್ವಸ್ಥಾನಸ್ಥಿತಾತಿಸ್ಥಿರಶಕಲಶಿಲಾಜಾಲಸಂಶ್ಲೇಷ-ನಷ್ಟಚ್ಛೇದಾಂಕಃ ಪ್ರಾಗಿವಾಭೂತ್ ಕಪಿವರವಪುಷಸ್ತೇ ನಮಃ ಕೌಶಲಾಯ ॥ ೧೯ ॥**

ಅತುಲಮತೇ = ಅತುಲ–ಅಸದೃಶವಾದ, ಮತೇ–ಬುದ್ಧಿಯುಳ್ಳ ಹನು ಮಂತನೇ! ಶತಂ–ನೂರು, ಯೋಜನಾನಾಂ–ಯೋಜನಗಳ, ಉಚ್ಚಃ–ಎತ್ತರ ವಾದ, ತಾವತ್–ಅಷ್ಟೇ (ನೂರು ಯೋಜನ), ವಿಸ್ತಾರವಾನ್–ವಿಶಾಲವಾದ, ಸಃ–ಆ ಗಂಧಮಾದನವು, ವ್ಯಗ್ರಬುದ್ಧ್ಯಾ = ವ್ಯಗ್ರ–ಕಾರ್ಯಾಂತರದಲ್ಲಿದ್ದ, ಬುದ್ಧ್ಯಾ–ಬುದ್ಧಿಯಿಂದ, ತ್ವಯಾ–ನಿನ್ನಿಂದ, ಉಪಲಲವ ಇವ–ಕಲ್ಲಿನ ಹರಳಿ

ನಂತೆ, ಅತಃ–ಈ ಲಂಕಾಪಟ್ಟಣದ ದೆಸೆಯಿಂದ, ಸಲೀಲಂ–ವಿನೋದದಿಂದ ಕೂಡಿದ್ದಾಗಿ, ಕ್ಷಿಪ್ತಃ–ಬಿಸುಡಲ್ಪಟ್ಟದ್ದಾಗಿ, ಸ್ವಸ್ವಸ್ಥಾನ...ಭೇದಾಂಕಃ =ಸ್ವಸ್ವ ಸ್ಥಾನ–ತಂತಮ್ಮ ಸ್ಥಳಗಳಲ್ಲಿ, ಸ್ಥಿತ–ಕುಳಿತ, ಅತಿಸ್ಥಿರ–ಅತ್ಯಂತ ಗಟ್ಟಿಯಾದ, ಶಕಲ–ತುಂಡುಗಳುಳ್ಳ, ಶಿಲಾ–ಕಲ್ಲುಗಳ, ಜಾಲ–ಸಮೂಹದ, ಸಂಶ್ಲೇಷ–ಸಂಬಂಧದಿಂದ, ನಷ್ಟ–ಕಾಣದಿರುವ, ಭೇದ–ತುಂಡಾದುದರ, ಅಂಕಃ–ಚಿಹ್ನೆಯುಳ್ಳದ್ದಾಗಿ, ಪಶ್ಚಾತ್–ಅನಂತರದಲ್ಲಿಯೂ ಕೂಡ, ಪ್ರಾಗಿವ–ಕೀಳುವ ಮೊದಲಿದ್ದಂತೆಯೇ, ಅಭೂತ್–ಆಯಿತು, ಕಪಿವರವಪುಷಃ = ಕಪಿವರ–ಕಪಿಗಳಲ್ಲಿ ಶ್ರೇಷ್ಠವಾದ, ವಪುಷಃ–ದೇಹವುಳ್ಳ, ತೇ–ನಿನ್ನ, ಕೌಶಲಾಯ–ಚಾತುರ್ಯಕ್ಕೆ, ನಮಃ–ನಮಸ್ಕಾರ.

ನೂರು ಗಾವುದ ಎತ್ತರವೂ ಅಗಲವೂ ಇದ್ದ ಆ ಬೆಟ್ಟವನ್ನು ಲಂಕೆಯಲ್ಲಿ ನಿಂತುಕೊಂಡೇ ಬೇರೆ ಆಲೋಚನೆಯಿಂದ ಎಲ್ಲಿಯೋ ಒಂದು ಕಡೆಗೆ ನೀನು ಎಸೆದಿದ್ದರೂ ಅದು ತನ್ನ ಸ್ಥಳದಲ್ಲಿ ಸರಿಯಾಗಿ ಮೊದಲಿನಂತೆ ನಿಂತು, ಕಿತ್ತಿದ್ದ ಗುರುತೂ ಕೂಡ ಇಲ್ಲದಂತಾಯಿತು. ಇಂತಹ ಜಾಣತನವು ಅತ್ಯಾಶ್ಚರ್ಯಕರ. (ವ್ಯಗ್ರಬುದ್ಧ್ಯಾ–ಶ್ರೀರಾಮನಲ್ಲಿ ನೆಟ್ಟ ಮನಸ್ಸಿನಿಂದ ಎಂದು ಭಾವ.) (ಈ ಶ್ಲೋಕಪುರಶ್ಚರಣದಿಂದ ಸ್ಥಿರಪ್ರಯೋಜನಸಿದ್ಧಿ. ಯುದ್ಧಭಗ್ನಾಂಗಲಾಭ. ಕೈ ತಪ್ಪಿದ ರಾಜ್ಯದ ಪುನರ್ಲಾಭ.) ॥ ೧೯ ॥

**ದೃಷ್ಟ್ವಾ ದುಷ್ಟಾಧಿಪೋರಃ ಸ್ಫುಟಿತಕನಕಸದ್ವರ್ಮ ಘೃಷ್ಟಾಸ್ಥಿ-ಕೂಟಂ ನಿಷ್ಪಿಷ್ಟಂ ಹಾಟಕಾದ್ರಿಪ್ರಕಟತಟತಟಾಕಾತಿಶಂಕೋ ಜನೋಽಭೂತ್ । ಯೇನಾಽಜೌ ರಾವಣಾರಿಪ್ರಿಯನಟನಪಟು-ರ್ಮುಷ್ಟಿರಿಷ್ಟಂ ಪ್ರದೇಷ್ಟುಂ ಕಿಂ ನೇಷ್ಟೇ ಮೇ ಸ ತೇಽಷ್ಟಾಪದ-ಕಟಕತಟಿತ್ಕೋಟಿಭಾಮೃಷ್ಟಕಾಷ್ಠಃ ॥ ೨೦ ॥**

(ಮುಖ್ಯಪ್ರಾಣ–ಶ್ರೀಮುಖ್ಯಪ್ರಾಣನೇ!) ಯೇನ–ಯಾವ ಮುಷ್ಟಿಯಿಂದ, ಸ್ಫುಟಿತಕನಕಸದ್ವರ್ಮ=ಸ್ಫುಟಿತ–ಸೀಳಲ್ಪಟ್ಟ, ಕನಕ–ಚಿನ್ನದ, ಸತ್–ಉತ್ತಮವಾದ, ವರ್ಮ–ಕವಚವುಳ್ಳ, ಘೃಷ್ಟಾಸ್ಥಿಕೂಟಂ=ಘೃಷ್ಟ–ಪುಡಿಮಾಡಲ್ಪಟ್ಟ, ಅಸ್ಥಿಕೂಟಂ–ಎಲುಬುಗಳ ಸಮೂಹವುಳ್ಳ, ನಿಷ್ಪಿಷ್ಟ–ಚೆನ್ನಾಗಿ ಪುಡಿಮಾಡಲ್ಪಟ್ಟ, ದುಷ್ಟಾಧಿಪೋರಃ=ದುಷ್ಟ–ಕೆಟ್ಟ ರಾಕ್ಷಸರ, ಅಧಿಪ–ಸ್ವಾಮಿಯಾದ ರಾವಣನ, ಉರಃ–ಎದೆಯನ್ನು, ಜನಃ–ಜನವು, ದೃಷ್ಟ್ವಾ–ನೋಡಿ, ಹಾಟಕಾದ್ರಿ... ಶಂಕಃ=ಹಾಟಕ–ಚಿನ್ನದ, ಅದ್ರಿ–[ಮೇರು] ಪರ್ವತದಲ್ಲಿ, ಪ್ರಕಟ–ವಿಸ್ತೃತವಾದ, ತಟ[ಇತಿ]–ದಡವೆಂದು, ಅತಿಶಂಕಃ–ಅತ್ಯಂತ ಸಂದೇಹವುಳ್ಳದ್ದು, ಅಭೂತ್–

ಆಯಿತೋ, ಆಜೌ–ಯುದ್ಧದಲ್ಲಿ, ರಾವಣಾರಿ–ಶ್ರೀರಾಮನ, ಪ್ರಿಯಂ–ಇಷ್ಟದ, ನಟನ–[ಕಾರ್ಯ]ಮಾಡುವುದರಲ್ಲಿ, ಪಟು–ಸಮರ್ಥವಾದ, ಅಷ್ಟಾಪದ... ಪ್ಯಷ್ಟಕಾಷ್ಠಃ=ಅಷ್ಟಾಪದ–ಚಿನ್ನದ, ಕಟಕ–ಕಡಗದ, ತಟಿತ್–ಮಿಂಚುಗಳ, ಕೋಟಿ–ಕೋಟಿಯಂತೆ, ಭಾ–ಕಾಂತಿಯಿಂದ, ಆವ್ಯಷ್ಟ–ವ್ಯಾಪಿಸಲ್ಪಟ್ಟ, ಕಾಷ್ಠಃ-ದಿಕ್ಕುಗಳುಳ್ಳ, ತೇ–ನಿನ್ನ, ಮುಷ್ಟಿಃ–ಮುಷ್ಟಿ[ಹಿಡಿ]ಯು, ಮೇ–ನನ್ನ, ಇಷ್ಟಂ–ಅಭೀಷ್ಟವನ್ನು, ಪ್ರದೇಷ್ಟುಂ–ಕೊಡುವುದಕ್ಕೆ, ಕಿಂ–ಏನು, ನ ಶಕ್ನೋತಿ–ಸಮರ್ಥವಾಗುವುದಿಲ್ಲವೇ ? (ಸಮರ್ಥವಾಗಿದೆ.)

ಹನುಮಂತನ ಮುಷ್ಟಿಯು ಶ್ರೀರಾಮನಿಗೆ ಇಷ್ಟವಾದುದನ್ನು ಮಾಡ ತಕ್ಕುದು; ಮಿಂಚಿನಂತೆ ಹೊಳೆವ ಚಿನ್ನದ ಕಡಗಗಳ ಕಾಂತಿಯಿಂದ ದಿಕ್ಕುಗಳನ್ನೇ ಪ್ರಕಾಶಿಸತಕ್ಕುದು. ಇಂತಹ ಮುಷ್ಟಿಯು ರಾವಣನ ಎದೆಯನ್ನು ಪುಡಿಮಾಡಿದಾಗ, ಎದೆಯನ್ನು ಮುಚ್ಚಿದ್ದ ಕವಚದೊಡನೆ ಒಳಗಿನ ಎಲುಬುಗಳೂ ಪುಡಿಯಾದುದನ್ನು ಕಂಡು, ಜನರು ಮೇರುವಿನ ಬಳಿಯ ಕೆರೆಯೆಂಬ ಭ್ರಾಂತಿಯನ್ನು ಹೊಂದಿದರು. (ಎದೆಯು ಅಷ್ಟು ಕುಸಿಯಿತೆಂದು ಭಾವ.)ಅಂತಹ ಮುಷ್ಟಿಯು ನನ್ನ ಇಷ್ಟವನ್ನು ಕೊಡಲಾರದೆ? (ಈ ಶ್ಲೋಕಪುರಶ್ಚರಣದಿಂದ ಯುದ್ಧ ಜಯಸಿದ್ಧಿ.) ॥ ೨೦ ॥

**ದೇವ್ಯಾದೇಶಪ್ರಣೀತಿದ್ರುಹಿಣಹರವರಾವಧ್ಯರಕ್ಷೋವಿಘಾತಾ-ದ್ಯಾಸೇವೋದ್ಯದ್ದಯಾರ್ದ್ರಃ ಸಹಭುಜಮಕರೋದ್ರಾಮನಾಮಾ ಮುಕುಂದಃ । ದುಷ್ಪ್ರಾಪೇ ಪಾರಮೇಷ್ಠ್ಯೇ ಕರತಲಮತುಲಂ ಮೂರ್ಧ್ನಿ ವಿನ್ಯಸ್ಯ ಧನ್ಯಂ ತನ್ವನ್ ಭೂಯಃ ಪ್ರಭೂತಪ್ರಣಯ-ವಿಕಸಿತಾಬ್ಜೇಕ್ಷಣಸ್ತ್ವೇಕ್ಷಮಾಣಃ ॥ ೨೧ ॥**

(ಶ್ರೀಹನುಮಂತನೇ!) ದೇವ್ಯಾದೇಶ...ದಯಾರ್ದ್ರಃ =ದೇವೀ–ಸೀತಾದೇವಿಯನ್ನು ಕುರಿತು, ಆದೇಶ–ಶ್ರೀರಾಮನ ಅಪ್ಪಣೆಯನ್ನು, ಪ್ರಣೀತಿ–ಕೊಂಡೊಯ್ದುದು(ಅಥವಾ ದೇವೀ–ಸೀತಾದೇವಿಯು, ಆದೇಶ–ಆಜ್ಞೆಯನ್ನು ಶ್ರೀರಾಮನನ್ನು ಕುರಿತು, ಪ್ರಣೀತಿ–ಕೊಂಡೊಯ್ಯುವುದು), ದ್ರುಹಿಣ–ಚತುರ್ಮುಖ ಬ್ರಹ್ಮ, ಹರ–ರುದ್ರದೇವ ಇವರುಗಳ, ವರ–ವರಗಳಿಂದ, ಅವಧ್ಯ–ಕೊಲ್ಲಲ್ಪಡಲು ಅಸಾಧ್ಯರಾದ, ರಕ್ಷಃ–ಅಕ್ಷಕುಮಾರಾದಿ ರಾಕ್ಷಸರ, ವಿಘಾತ–ಕೊಲ್ಲುವಿಕೆಯು, ಆದಿ – ಇವೇ ಮೊದಲಾಗಿರುವ, ಆಸೇವಾ – ನಿತ್ಯಸೇವೆಗಳಿಂದ, ಉದ್ಯತ್–ಪ್ರಕಟವಾಗಿ ತೋರುವ, ದಯಾ–ಕೃಪೆಯಿಂದ, ಆರ್ದ್ರಃ–ತೋಯ್ದ,

ದುಷ್ಪ್ರಾಪೇ–ಹೊಂದಲಸಾಧ್ಯವಾದ, ಪಾರಮೇಷ್ಠ್ಯೇ–ಚತುರ್ಮುಖಬ್ರಹ್ಮಸ್ವರೂಪವಿಷಯದಲ್ಲಿ, ಅತುಲಂ–ಅಸದೃಶವಾದ, ಕರತಲಂ–ಅಂಗೈಯನ್ನು, ಮೂರ್ಧ್ನಿ–ತಲೆಯಲ್ಲಿ, ವಿನ್ಯಸ್ಯ–ಇಟ್ಟು, ಧನ್ಯಂ–ಕೃತಾರ್ಥನನ್ನು. ತನ್ವನ್–ಮಾಡತಕ್ಕ, ಭೂಯಃ–ಮರಳಿ ಮರಳಿ, ಪ್ರಭೂತ...ಬ್ಜೇಕ್ಷಣಃ=ಪ್ರಭೂತ–ಬಹಳವಾದ, ಪ್ರಣಯ–ಸ್ನೇಹದಿಂದ, ವಿಕಸಿತ–ಅರಳಿದ, ಅಬ್ಜೇಕ್ಷಣಃ–ತಾವರೆಯಂತಹ ಕಣ್ಣುಗಳುಳ್ಳ, ರಾಮನಾಮಾ–ಶ್ರೀರಾಮನೆಂದು ಹೆಸರುಳ್ಳ, ಮುಕುಂದಃ–ಮೋಕ್ಷಪ್ರದನಾದ ಶ್ರೀವಿಷ್ಣುವು, ತ್ವಾ–ನಿನ್ನನ್ನು, ಈಕ್ಷಮಾಣಃ (ಸನ್)–ನೋಡತಕ್ಕವನಾಗಿ, ಸಹಭುಜಂ–ಕೂಡಿಕೊಂಡು ಭೋಗಿಸತಕ್ಕವನನ್ನು, ಅಕರೋತ್–ಮಾಡಿದನು.

ಲಂಕೆಯಲ್ಲಿರುವ ಸೀತಾದೇವಿಗೆ ರಾಮಸಂದೇಶವನ್ನು ಒಯ್ದುದು, ಬ್ರಹ್ಮ-ರುದ್ರರ ವರಬಲದಿಂದ ಅವಧ್ಯರಾದ ರಾಕ್ಷಸರನ್ನು ಕೊಂದುದು–ಮೊದಲಾದ ಸೇವೆಯಿಂದ ಮೋಕ್ಷದಾತನಾದ ಶ್ರೀರಾಮನು ತೃಪ್ತನಾಗಿ, ಇನ್ನೊಬ್ಬರಿಗೆ ದೊರೆಯದ ಚತುರ್ಮುಖರೂಪ ಪ್ರಾಪ್ತಿಯಾಗುವಂತೆ ಶಿರಸ್ಸಿನಲ್ಲಿ ಕೈಯಿಟ್ಟು ಧನ್ಯನನ್ನಾಗಿ ಮಾಡಿ, ಆ ಚತುರ್ಮುಖ ಬ್ರಹ್ಮತ್ವ ಬಂದಾಗ, ಮೋಕ್ಷದಲ್ಲಿ ಸಾಯುಜ್ಯ ಮೋಕ್ಷವೆಂದರೆ ಲಕ್ಷ್ಮೀದೇವಿಯ ಭೋಗವೊಂದು ಹೊರತು ಉಳಿದ ಸರ್ವಭೋಗಗಳನ್ನು ತನ್ನೊಡನೆ ಅನುಭವಿಸತಕ್ಕವನೆಂದು ಅನುಗ್ರಹಿಸಿದನು. (ಈ ಶ್ಲೋಕಪುರಶ್ಚರಣದಿಂದ ಪತ್ನೀಪುತ್ರಾದಿಗಳ ಅಗಲುವಿಕೆಯ ದೋಷ ನಿವೃತ್ತಿ; ನಷ್ಟದ್ರವ್ಯಪ್ರಾಪ್ತಿ.) ॥ ೨೧ ॥

ಇನ್ನು ಮುಂದೆ ಭೀಮಾವತಾರವನ್ನು ವರ್ಣಿಸುತ್ತಾರೆ:

**ಜಘ್ನೇ ನಿಘ್ನೇನ ವಿಘ್ನೋ ಬಹುಲಬಲಬಕಧ್ವಂಸನಾದ್ಯೇನ ಶೋಚದ್ವಿಪ್ರಾನುಕ್ರೋಶಪಾಶೈರಸುವಿಧೃತಿಸುಖಸ್ಯೈಕಚಕ್ರಾಜನಾನಾಮ್ । ತಸ್ಮೈ ತೇ ದೇವ ಕುರ್ಮಃ ಕುರುಕುಲಪತಯೇ ಕರ್ಮಣಾ ಚ ಪ್ರಣಾಮಾನ್ ಕಿರ್ಮೀರಂ ದುರ್ಮತೀನಾಂ ಪ್ರಥಮಮಥ ಚ ಯೋ ನರ್ಮಣಾ ನಿರ್ಮಮಾಥ ॥ ೨೨ ॥**

ದೇವ–ಕ್ರೀಡಾದಿಗುಣಗಳಿರುವ ಶ್ರೀಮುಖ್ಯಪ್ರಾಣನೇ! ಶೋಚದ್ವಿಪ್ರಾನುಕ್ರೋಶಪಾಶೈಃ=ಶೋಚತ್–ದುಃಖಿಸುವ, ವಿಪ್ರ–ಬ್ರಾಹ್ಮಣರಲ್ಲಿ, ಅನುಕ್ರೋಶ–ದಯೆಯೆಂಬ, ಪಾಶೈಃ–ಹಗ್ಗಗಳಿಂದ, ನಿಘ್ನೇನ–ಅಧೀನನಾದ, ಯೇನ–ಯಾವ ಭೀಮಸ್ವರೂಪನಾದ ನಿನ್ನಿಂದ, ಬಹುಲಬಲಬಕಧ್ವಂಸನಾತ್=ಬಹುಲ–ಹೆಚ್ಚಾದ, ಬಲ–ಸಾಮರ್ಥ್ಯವುಳ್ಳ, ಬಕ–ಬಕಾಸುರನ, ಧ್ವಂಸನಾತ್–ನಾಶದ

ದೆಸೆಯಿಂದ, ಏಕಚಕ್ರಾಜನಾನಾಂ–ಏಕಚಕ್ರಾನಗರಿಯ ಜನರ, ಅಸುವಿಧೃತಿ–ಸಂಖಸ್ಯ=ಅಸು–ಪ್ರಾಣಗಳ, ವಿಧೃತಿ–ಧರಿಸುವಿಕೆಯಿಂದ ಹುಟ್ಟಿದ, ಸುಖಸ್ಯ–ಆನಂದಕ್ಕೆ, ವಿಘ್ನಃ–ತೊಂದರೆಯು, ಜಘ್ನೇ–ನಾಶಮಾಡಲ್ಪಟ್ಟಿತೋ, ಅಥ–ಮತ್ತು,(ಯಸ್ತ್ವಂ–ಯಾವ ನೀನು,)ದುರ್ಮತೀನಾಂ–ದುಷ್ಟ ಬುದ್ಧಿಯುಳ್ಳವರಿಗೆ, ಪ್ರಥಮ–ಶ್ರೇಷ್ಠನಾದ, ಕಿರ್ಮೀರಂ–ಬಕನ ತಮ್ಮನಾದ ಕಿರ್ಮೀರನನ್ನು, ನರ್ಮಣಾ–ಸುಖ (ಅನಾಯಾಸ) ದಿಂದ, ನಿರ್ಮಮಾಥ–ಮರ್ದಿಸಿದೆಯೋ, ತಸ್ಮೈಃ–ಅಂತಹ ಮಹಿಮನಾದ,ಕುರುಕುಲಪತಯೇ=ಕುರುಕುಲ-ಕುರುವಂಶಕ್ಕೆ, ಪತಯೇ–ಸ್ವಾಮಿಯಾದ, ತೇ–ನಿನಗೆ, ಕರ್ಮಣಾ–ದೇಹವ್ಯಾಪಾರದಿಂದಲೂ (ಮನಸ್ಸಿನಿಂದಲೂ ವಚನದಿಂದಲೂ), ಪ್ರಣಾಮಾನ್–ನಮಸ್ಕಾರಗಳನ್ನು, ಕುರ್ಮಃ–ಮಾಡುತ್ತೇವೆ.

ಭೀಮನಾಗಿ ಏಕಚಕ್ರಾನಗರಿಯ ಬ್ರಾಹ್ಮಣರ ಮೇಲೆ ದಯೆಮಾಡಿ, ಅವರಿಗೆ ದುಃಖ ಕೊಡುತ್ತಿದ್ದ ಬಕಾಸುರನನ್ನು ಕೊಂದು, ಆ ಪಟ್ಟಣಿಗರಿಗೆ ಸುಖವನ್ನಿತ್ತಿರುವೆ; ಮತ್ತು ಆತನ ತಮ್ಮನಾದ ಕಿರ್ಮೀರನನ್ನೂ ಕೊಂದಿರುವೆ. ಅಂತಹ ಕುರುವಂಶದೀಪನಾದ ನಿನಗೆ ವಂದಿಸುವೆವು. (ಈ ಶ್ಲೋಕಪುರಶ್ಚರಣದಿಂದ ವಿಘ್ನಪರಿಹಾರ ಮತ್ತು ದುಷ್ಟನಿಗ್ರಹ.) ॥ ೨೨ ॥

**ನಿರ್ಮೃದ್ನನ್ನತ್ಯಯತ್ನಂ ವಿಜರವರ ಜರಾಸಂಧಕಾಯಾಸ್ಥಿಸಂಧೀನ್ಯುದ್ಧೇ ತ್ವಂ ಸ್ವಧ್ವರೇ ವಾ ಪಶುಮಿವ ದಮಯನ್ ವಿಷ್ಣುಪಕ್ಷದ್ವಿಡೀಶಮ್ । ಯಾವತ್ ಪ್ರತ್ಯಕ್ಷಭೂತಂ ನಿಖಿಲಮಖಭುಜಂ ತರ್ಪಯಾಮಾಸಿಥಾಸೌ ತಾವತ್ಯಾಯೋಜಿ ತೃಪ್ತ್ಯಾ ಕಿಮು ವದ ಭಗವನ್ ರಾಜಸೂಯಾಶ್ವಮೇಧೇ ॥ ೨೩ ॥**

ವಿಜರವರ=ವಿಜರ–ಮುದಿತನವಿಲ್ಲದ ದೇವತೆಗಳಿಗೆ, ವರ–ಶ್ರೇಷ್ಠನಾದ ಶ್ರೀ ಮುಖ್ಯಪ್ರಾಣನೇ ! ಜರಾಸಂಧ...ಸಂಧೀನ್=ಜರಾಸಂಧ–ಜರಾಸಂಧನೆಂಬ ಅರಸನ, ಕಾಯ–ದೇಹದ, ಅಸ್ಥಿ–ಎಲುಬುಗಳ, ಸಂಧೀನ್–ಸಂದುಗಳನ್ನು, ಅತ್ಯಯತ್ನಂ–ಹೆಚ್ಚು ಪ್ರಯತ್ನವಿಲ್ಲದೆ, ನಿರ್ಮೃದ್ನನ್–ಮರ್ದಿಸುವ, ತ್ವಂ–ನೀನು, ಯುದ್ಧೇ–ಯುದ್ಧದಲ್ಲಿ, ಸ್ವಧ್ವರೇವಾ–ಉತ್ತಮಯಾಗದಲ್ಲಿಯೆಂಬಂತೆ, ವಿಷ್ಣುಪಕ್ಷದ್ವಿಡೀಶಂ=ವಿಷ್ಣು–ಶ್ರೀಹರಿಯ, ಪಕ್ಷ–ಸಹಾಯಕರಾದ ದೇವತೆಗಳಿಗೆ, ದ್ವಿಟ್–ದ್ವೇಷಿಗಳಾದ ದೈತ್ಯರಿಗೆ, ಈಶಂ–ಸ್ವಾಮಿಯಾದ ಜರಾಸಂಧನನ್ನು, ಪಶುಮಿವ–ಯಜ್ಞಪಶುವಿನೋಪಾದಿ, ದಮಯನ್(ಸನ್)–ಕೊಲ್ಲುವವನಾಗಿ,

ಪ್ರತ್ಯಕ್ಷಭೂತಂ-ಕಣ್ಣಿಗೆ ಕಾಣುತ್ತಿರುವ, ನಿಖಿಲಮಖಭುಜಂ = ನಿಖಿಲ-ಎಲ್ಲ ಮಖ-ಯಜ್ಞಗಳನ್ನು. ಭುಜಂ-ಭೋಜನ ಮಾಡುವವನನ್ನು (ಶ್ರೀವಿಷ್ಣುವನ್ನು), ಯಾವತ್ - ಹೇಗೆ, ತರ್ಪಯಾಮಾಸಿಥ - ತೃಪ್ತಿಪಡಿಸಿದೆಯೋ, ಭಗವನ್-ಷಡ್ಗುಣಪೂರ್ಣನಾದ ಶ್ರೀಭೀಮನೇ! ತ್ವಯಾ-ನಿನ್ನಿಂದ, ಅಸೌ-ಈ ಶ್ರೀವಿಷ್ಣುವು, ರಾಜಸೂಯಾಶ್ವಮೇಧೇ-ರಾಜಸೂಯ-ಅಶ್ವಮೇಧಗಳೆಂಬ ಯಜ್ಞಗಳಲ್ಲಿ, ತಾವತ್ಯಾ...ತೃಪ್ತ್ಯಾ-ಅಷ್ಟು ಪ್ರೀತಿಯಿಂದ, ಅಯೋಜಿ ಕಿಮು-ಕೂಡಿಸಲ್ಪಟ್ಟನೇ ? ವದ-ಹೇಳು.

ಜರಾಸಂಧನು ಹುಟ್ಟುವಾಗ, ಎರಡು ಹೋಳಾಗಿ ಬಿದ್ದಿರಲು, ಆ ಹೋಳುಗಳನ್ನು ಜರೆಯೆಂಬ ರಾಕ್ಷಸಿ ಸಂದುಕೂಡುವಂತೆ ಜೋಡಿಸಿದ್ದಳು. ಜರಾಸಂಧನ ಆ ಸಂದುಗಳನ್ನು ಯಜ್ಞದಲ್ಲಿ ಪಶುವನ್ನು ಮರ್ದಿಸುವಂತೆ. ಹೆಚ್ಚಿನ ಪ್ರಯತ್ನವಿಲ್ಲದೆ ಪುಡಿಮಾಡಿ, ಬಳಿಯಲ್ಲಿಯೇ ಪ್ರತ್ಯಕ್ಷ ನಿಂತಿರುವ ಶ್ರೀಕೃಷ್ಣನನ್ನು ಎಷ್ಟು ತೃಪ್ತಿಪಡಿಸಿದೆಯೋ ಅಷ್ಟು ತೃಪ್ತಿಯನ್ನು ರಾಜಸೂಯಾಶ್ವಮೇಧಗಳಿಂದಲೂ ಉಂಟುಮಾಡಲಿಲ್ಲ. ಆ ಮಹಾಯಜ್ಞಗಳಿಗಿಂತಲೂ ವಿಷ್ಣುಭಕ್ತದ್ವೇಷಿಯಾದ ಜರಾಸಂಧನ ವಧೆಯಿಂದ ಶ್ರೀಕೃಷ್ಣ ತೃಪ್ತನಾದನು, (ಇಲ್ಲಿ ಭೀಮನ ಶಕ್ತಿಯು ವರ್ಣಿತವಾಗಿದೆ.) (ಈ ಶ್ಲೋಕ ಪುರಶ್ಚರಣದಿಂದ ಯುದ್ಧಸನ್ನಾಹಸಿದ್ಧಿ.) ॥ ೨೩ ॥

**ಕ್ಷ್ವೇಲಾಕ್ಷೀಣಾಟ್ಟಹಾಸಂ ತವ ರಣಮರಿಹನ್ನುದ್ಗದೋದ್ದಾಮ-ಬಾಹೋರ್ಬಹ್ವಕ್ಷೌಹಿಣ್ಯನೀಕಕ್ಷಪಣಸುನಿಪುಣಂ ಯಸ್ಯ ಸರ್ವೋತ್ತಮಸ್ಯ । ಶುಶ್ರೂಷಾರ್ಥಂ ಚಕರ್ಥ ಸ್ವಯಮಯಮಥ ಸಂವಕ್ತುಮಾನಂದತೀರ್ಥಶ್ರೀಮನ್ನಾಮನ್ ಸಮರ್ಥಸ್ತ್ವಮಪಿ ಹಿ ಯುವಯೋಃ ಪಾದಪದ್ಮಂ ಪ್ರಪದ್ಯೇ ॥ ೨೪ ॥**

ಅರಿಹನ್-ಶತ್ರುಗಳನ್ನು ಸಂಹರಿಸತಕ್ಕ, ಉದ್ಗದೋದ್ದಾಮಬಾಹೋಃ= ಉದ್ಗದಾ-ಉತ್ತಮ ಗದೆಯಿಂದ, ಉದ್ದಾಮ-ಬಲಿಷ್ಠವಾದ, ಬಾಹೋಃ-ತೋಳುಳ್ಳ (ಅಥವಾ ಉದ್ಗದಾ-ಉತ್ತಮ ಗದೆಯುಳ್ಳ, ಉದ್ದಾಮಬಾಹೋಃ-ಬಲಿಷ್ಠವಾದ ತೋಳುಗಳುಳ್ಳ) ಭೀಮಸೇನನ, ಕ್ಷ್ವೇಲಾಕ್ಷೀಣಾಟ್ಟಹಾಸಂ= ಕ್ಷ್ವೇಲಾ-ಸಿಂಹನಾದದಿಂದ, ಅಕ್ಷೀಣ-ಅಭಿವೃದ್ಧಿಹೊಂದಿದ, ಅಟ್ಟಹಾಸಂ-ದೊಡ್ಡ ನಗುವುಳ್ಳ, ಬಹ್ವಕ್ಷೌ...ನಿಪುಣಂ=ಬಹು-ಬಹಳ, ಅಕ್ಷೌಹಿಣೀ-ಅಕ್ಷೌಹಿಣಿಗಳಿರುವ, ಅನೀಕ-ಸೈನ್ಯದ, ಕ್ಷಪಣ-ನಾಶಮಾಡುವುದರಲ್ಲಿ, ಸುನಿಪುಣಂ - ಅತ್ಯಂತ ಚತುರವಾದ, ರಣಂ-ಯುದ್ಧವನ್ನು, ಯಸ್ಯ - ಯಾವ,

ಸರ್ವೋತ್ತಮಸ್ಯ–ಎಲ್ಲರಿಂದಲೂ ಶ್ರೇಷ್ಠನಾದ ಶ್ರೀವಿಷ್ಣುವಿನ, ಶುಶ್ರೂಷಾರ್ಥಂ–ಸೇವೆಗೋಸ್ಕರ, ಚಕರ್ಥ–ಮಾಡಿದೆಯೋ, ಆನಂದತೀರ್ಥಶ್ರೀಮನ್ನಾಮನ್ =ಆನಂದತೀರ್ಥ–ಆನಂದತೀರ್ಥರೆಂಬ, ಶ್ರೀಮತ್–ಪೂಜ್ಯವಾದ, ನಾಮನ್–ಹೆಸರುಳ್ಳ ಶ್ರೀಮುಖ್ಯಪ್ರಾಣನೇ! ಇಹ–ಈ ಯುದ್ಧದಲ್ಲಿ, ಅಯಂ–ಈ ಸರ್ವೋತ್ತಮನಾದ ಶ್ರೀವ್ಯಾಸರೂಪಿ ಶ್ರೀವಿಷ್ಣುವು, ಸ್ವಯಂ–ತಾನು, ಸಂವಕ್ತುಂ–ಸರಿಯಾಗಿ ಹೇಳುವುದಕ್ಕೆ, ಸಮರ್ಥಃ–ಶಕ್ತಿಯುಳ್ಳವನು, ಅಥ–ಹಾಗೆಯೇ, ತ್ವಮಪಿ–ನೀನು ಕೂಡ, ಸಮರ್ಥಃ–ಶಕ್ತಿಯುಳ್ಳವನು, ಹಿ–ಪ್ರಸಿದ್ಧ, (ಅಹಂ–ನಾನು) ಯುವಯೋಃ–ವ್ಯಾಸಮಧ್ವರೂಪಿಗಳಾದ ನಿಮ್ಮಿಬ್ಬರ, ಪಾದಪದ್ಮಂ–ಪಾದಕಮಲಗಳನ್ನು, ಪ್ರಪದ್ಯೇ–ಮರೆಹೋಗುತ್ತೇನೆ.

ಭೂಭಾರವನ್ನಿಳುಹಲು ಅವತರಿಸಿದ ಶ್ರೀಕೃಷ್ಣನ ಸೇವೆಗಾಗಿ ಭೀಮನು ಗದೆಯನ್ನೆತ್ತಿ, ಭುಜಬಲದಿಂದ ಹನ್ನೊಂದಕ್ಷೌಹಿಣೀ ಕೌರವಸೇನೆಯನ್ನು ಸಂಹರಿಸಿದ ಆ ಯುದ್ಧಚಮತ್ಕಾರವನ್ನು ವರ್ಣಿಸಲು ವ್ಯಾಸದೇವರೂ ಸ್ವಯಂ ಆ ಭೀಮಸೇನನೂ ಸಮರ್ಥರಾಗಿರುತ್ತಾರೆ. ('ಆನಂದತೀರ್ಥಶ್ರೀಮನ್ನಾಮನ್' ಎಂಬ ಹೆಸರಿಂದ ಸಂಬೋಧಿಸಿದುದರಿಂದ ಶ್ರೀಮಧ್ವಾವತಾರದಲ್ಲಿ 'ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ' ಗ್ರಂಥದಲ್ಲಿ ಭೀಮನ ಆ ಯುದ್ಧಕೌಶಲವನ್ನು ವರ್ಣಿಸಿದ ವಿಷಯವನ್ನು ಇಲ್ಲಿ ಸೂಚಿಸಿರುತ್ತಾರೆ.) ಅಂತಹ ಚರಿತ್ರೆಯನ್ನು ವರ್ಣಿಸಿದ ಶ್ರೀವ್ಯಾಸ-ಮಧ್ವರಿಗೆ ನಾನು ಕೇವಲ ವಂದನೆಯನ್ನರ್ಪಿಸುವೆನು. (ಈ ಶ್ಲೋಕಪುರಶ್ಚರಣದಿಂದ ರಾಜರು ವಶ್ಯರಾಗುವರು, ಎಂದರೆ ರಾಜಸೇವಾ ಲಾಭವಾಗುವುದು.) ॥ ೨೪ ॥

**ದ್ರುಹ್ಯಂತೀಂ ಹೃದ್ರುಹಂ ಮಾಂ ದ್ರುತಮನಿಲ ಬಲಾದ್ದ್ರಾವಯಂತೀಮವಿದ್ಯಾನಿದ್ರಾಂ ವಿದ್ರಾವ್ಯ ಸದ್ಯೋ ರಚನಪಟುಮಥಾಽಪಾದ್ಯ ವಿದ್ಯಾಸಮುದ್ರ । ವಾಗ್ದೇವೀ ಸಾ ಸುವಿದ್ಯಾದ್ರವಿಣದ ವಿದಿತಾ ದ್ರೌಪದೀ ರುದ್ರಪತ್ನ್ಯಾದ್ಯುದ್ರಿಕ್ತಾ ದ್ರಾಗಭದ್ರಾದ್ರಹಯತು ದಯಿತಾ ಪೂರ್ವಭೀಮಾಜ್ಞಯಾ ತೇ ॥ ೨೫ ॥**

ವಿದ್ಯಾಸಮುದ್ರ–ವಿದ್ಯೆಗಳಿಂದ ಸಮುದ್ರದಂತಿರುವ, ಸುವಿದ್ಯಾದ್ರವಿಣದ= ಸುವಿದ್ಯಾ–ಶೋಭನ ಅಧ್ಯಾತ್ಮ ವಿದ್ಯೆಯೆಂಬ, ದ್ರವಿಣ–ದ್ರವ್ಯವನ್ನು, ದ–ಕೊಡತಕ್ಕ, ಪೂರ್ವಭೀಮ–ಪೂರ್ವದಲ್ಲಿ ಭೀಮಸೇನಸ್ವರೂಪಿಯಾಗಿದ್ದ, ಅನಿಲ–ಶ್ರೀಮುಖ್ಯಪ್ರಾಣನೇ! ದ್ರೌಪದೀ (ಇತಿ)–ದ್ರೌಪದಿಯೆಂದು, ವಿದಿತಾ–ಪ್ರಸಿದ್ಧ

ಳಾದ, ರುದ್ರಪತ್ನ್ಯಾದ್ಯುದ್ರಿಕ್ತಾ=ರುದ್ರಪತ್ನೀ–ಪಾರ್ವತಿಯೇ, ಆದಿ–ಮೊದಲಾಗಿರುವ,(ಸೌಪರ್ಣೀ–ವಾರುಣೀದೇವಿಯರ ದೆಸೆಯಿಂದ.)ಉದ್ರಿಕ್ತಾ–ಶ್ರೇಷ್ಠಳಾದ (ಅಥವಾ: ರುದ್ರಪತ್ನಿ–ಪಾರ್ವತಿ, ಆದಿ–ಇಂದ್ರಪತ್ನಿ ಶಚೀದೇವಿ ಮೊದಲಾದವರಿಗಿಂತ, ಉದ್ರಿಕ್ತಾ–ಶ್ರೇಷ್ಠಳಾದ), ತೇ–ನಿನ್ನ, ದಯಿತಾ–ಪತ್ನಿಯಾದ, ಸಾ–ದ್ರೌಪದೀರೂಪಳಾದ, ವಾಗ್ದೇವೀ–ಭಾರತೀದೇವಿಯು,ದ್ರುಹ್ಯಂತೀಂ–ದ್ರೋಹಮಾಡುವ, ಹೃದ್ರುಹಾ–ಮನಸ್ಸಿನಲ್ಲಿ ಅಂಕುರಿಸಿದ, ದ್ರಾವಯಂತೀಂ–ಹಣದಾಸೆಯಿಂದ ಅತ್ತಿತ್ತ ಓಡಿಸತಕ್ಕ, ಅವಿದ್ಯಾನಿದ್ರಾಂ–ಅಜ್ಞಾನವೆಂಬ ನಿದ್ರೆಯನ್ನು, ತೇ–ನಿನ್ನ, ಆಜ್ಞಯಾ–ಅಪ್ಪಣೆಯಿಂದ, ದ್ರುತಂ–ಬೇಗನೇ. ವಿದ್ರಾವ್ಯ–ಓಡಿಸಿ, ಅಥ–ಆ ಮೇಲೆ, ಮಾಂ–ನನ್ನನ್ನು, ಸದ್ಯಃ–ಕೂಡಲೇ, ರಚನಪಟುಂ=ರಚನ–ಕಲ್ಪನೆ ಮಾಡುವುದರಲ್ಲಿ, ಪಟುಂ–ಚತುರನನ್ನು, ಆಪಾದ್ಯ–ಮಾಡಿ, ದ್ರಾಕ್–ಬೇಗನೇ, ಅಭದ್ರಾತ್–ಅಮಂಗಳದ ದೆಸೆಯಿಂದ, ಬಲಾತ್–ಬಲಾತ್ಕಾರದಿಂದ, ರಹಯತು–ಬಿಡಿಸಲಿ.

ವಿದ್ಯಾಸಮುದ್ರನೂ ವಿದ್ಯೆಯೆಂಬ ದ್ರವ್ಯವನ್ನು ಕೊಡುವವನೂ ಆದ ಶ್ರೀಮಧ್ವರೂಪಿ ಶ್ರೀವಾಯುದೇವನೇ! ಭೀಮರೂಪದಲ್ಲಿರುವಾಗ ದ್ರೌಪದಿಯೆನಿಸಿದ ನಿನ್ನ ಪತ್ನಿಯಾದ ಯಾವ ಆ ಭಾರತೀದೇವಿಯು ತನ್ನಲ್ಲಿದ್ದ ಪಾರ್ವತೀ ಶಚೀ ಮೊದಲಾದ ದೇವಿಯರಿಗಿಂತ ಶ್ರೇಷ್ಠಳಾಗಿದ್ದು ನಿನಗೆ ಆನಂದವನ್ನಿತ್ತಿರುವಳೋ, ಆ ದೇವಿಯು ನಿನ್ನ ಆಜ್ಞೆಯಿಂದ ನನ್ನ ಅಜ್ಞಾನದಿಂದುಂಟಾದ ಆಲಸ್ಯವನ್ನೋಡಿಸಿ, ಅಮಂಗಳವನ್ನು ನಿವಾರಿಸಿ, ಕವಿತಾಶಕ್ತಿಯನ್ನು ಕೊಡಲಿ, (ಎಂದು ಶ್ರೀಭಾರತೀಪ್ರಾರ್ಥನೆಯನ್ನೂ ಮಾಡಿರುತ್ತಾರೆ.)

'ರುದ್ರಪತ್ನ್ಯಾದ್ಯುದ್ರಿಕ್ತಾ' ಎಂದುದರಿಂದ ದ್ರೌಪದೀದೇಹದಲ್ಲಿ ಪಾರ್ವತೀ-ಶಚೀ-ಶ್ಯಾಮಲಾ-ಉಷಾದೇವಿಯರು ಇದ್ದರೆಂದೂ ಅವರಿಗಿಂತ ಶ್ರೇಷ್ಠಳಾಗಿ ಇದ್ದ ಭಾರತೀದೇವಿಯು ದ್ರೌಪದಿಯಾಗಿ ಭೀಮನಿಗೆ ತನ್ನ ಭೋಗವನ್ನಿತ್ತಿರುವಳೆಂದೂ ಸೂಚಿತವಾಗಿದೆ. ಈ ಶ್ಲೋಕಪುರಶ್ಚರಣದಿಂದ ವಾಕ್ಪಟುತ್ವ- ಕವಿತ್ವಶಕ್ತಿಸಿದ್ಧಿ, ಅಜ್ಞಾನನಾಶ.) ॥ ೨೫ ॥

ಯಾಭ್ಯಾಂ ಶುಶ್ರೂಷುರಾಸೀಃ ಕುರುಕುಲಜನನೇ ಕ್ಷತ್ರವಿ-
ಪ್ರೋದಿತಾಭ್ಯಾಂ ಬ್ರಹ್ಮಭ್ಯಾಂ ಬೃಂಹಿತಾಭ್ಯಾಂ ಚಿತಿಸುಖವಪುಷಾ
ಕೃಷ್ಣನಾಮಾಸ್ಪದಾಭ್ಯಾಮ್ । ನಿರ್ಭೇದಾಭ್ಯಾಂ ವಿಶೇಷಾದ್ದ್ವಿವ-
ಚನವಿಷಯಾಭ್ಯಾಮುಭಾಭ್ಯಾಮಮೂಭ್ಯಾಂ ತುಭ್ಯಂ ಚ ಕ್ಷೇಮ-
ದೇಭ್ಯಃ ಸರಸಿಜವಿಲಸಲ್ಲೋಚನೇಭ್ಯೋ ನಮೋಽಸ್ತು ॥ ೨೬ ॥

(ತ್ವಂ–ನೀನು) ಕುರುಕುಲಜನನೇ=ಕುರು–ಕುರು ಎಂಬ ಅರಸನ, ಕುಲ–ವಂಶದಲ್ಲಿ ಮಾಡಿದ, ಜನನೇ–ಅವತಾರ (ಭೀಮಾವತಾರ)ದಲ್ಲಿ, ಕ್ಷತ್ರವಿಪ್ರೋದಿತಾಭ್ಯಾಂ=ಕ್ಷತ್ರ–ಕ್ಷತ್ರಿಯನಾದ ವಸುದೇವನು, ವಿಪ್ರ–ಬ್ರಾಹ್ಮಣನಾದ ಪರಾಶರನು ಇವರುಗಳ ದೆಸೆಯಿಂದ, ಉದಿತಾಭ್ಯಾಂ–ಅವತರಿಸಿದ (ಅಥವಾ ಕ್ಷತ್ರಿಯನಾಗಿಯೂ ಬ್ರಾಹ್ಮಣನಾಗಿಯೂ ಅವತರಿಸಿದ), ಚಿತಿಸುಖವಪುಷಾ=ಚಿತಿ–ಜ್ಞಾನ, ಸುಖ, ಆನಂದ ಇವುಗಳೆಂಬ, ವಪುಷಾ–ದೇಹದಿಂದ, ಬೃಂಹಿತಾಭ್ಯಾಂ–ಅಭಿವೃದ್ಧಿ ಹೊಂದಿದ, ನಿರ್ಭೇದಾಭ್ಯಾಂ–ತಮ್ಮೊಳಗೆ ಪರಸ್ಪರ ಭೇದವಿಲ್ಲದ, ವಿಶೇಷಾತ್–ತಮ್ಮ ಶಕ್ತಿಯ ದೆಸೆಯಿಂದ, ದ್ವಿವಚನವಿಷಯಾಭ್ಯಾಂ–ಕೃಷ್ಣ ವ್ಯಾಸ ಎಂದು ಎರಡೆಂಬ ವಚನಕ್ಕೊಳಗಾದ, ಉಭಾಭ್ಯಾಂ–ಇಬ್ಬರಾದ, ಕೃಷ್ಣನಾಮಾಸ್ಪದಾಭ್ಯಾಂ=ಕೃಷ್ಣ-ಕೃಷ್ಣರೆಂಬ, ನಾಮ–ಹೆಸರುಗಳಿಗೆ, ಆಸ್ಪದಾಭ್ಯಾಂ–ವಿಷಯರಾದ, ಬ್ರಹ್ಮಭ್ಯಾಂ–ಬ್ರಹ್ಮನೆಂದು ಹೇಳಲ್ಪಡುವ, ಯಾಭ್ಯಾಂ–ಯಾವ ಶ್ರೀಕೃಷ್ಣ ವೇದವ್ಯಾಸರುಗಳಿಗೋಸ್ಕರ, ಶಶ್ರೂಷುಃ–ಸೇವಿಸಲಪೇಕ್ಷಿಸುವವನು, ಆಸೀಃ–ಆಗಿದ್ದೆಯೋ, ತುಭ್ಯಂ ಚ–ಶ್ರೀಭೀಮನಾದ ನಿನಗೂ ಸಹ, ಕ್ಷೇಮದೇಭ್ಯಃ–ಸುಖವನ್ನು ಕೊಡುವ, ಸರಸಿಜವಿಲಸಲ್ಲೋಚನೇಭ್ಯಃ=ಸರಸಿಜ–ತಾವರೆಯಂತೆ, ವಿಲಸತ್–ಶೋಭಿಸುವ, ಲೋಚನೇಭ್ಯಃ–ಕಣ್ಣುಗಳುಳ್ಳವರಿಗೆ (ಶ್ರೀಕೃಷ್ಣ-ವ್ಯಾಸ-ಭೀಮರಿಗೆ), ನಮಃ–ನಮಸ್ಕಾರವು, ಅಸ್ತು–ಇರಲಿ.

ಸೂಚನೆ:— ಶ್ರೀನಾರಾಯಣನು ಕೃಷ್ಣನಾಗಿ ಅವತರಿಸಿದವನು, ವೇದವ್ಯಾಸರು ಬೇರೊಬ್ಬ ಮುನಿ ಎಂಬ ಮತವನ್ನು ನಿರಾಕರಿಸಲು ಶ್ರೀಕೃಷ್ಣನೂ, ವ್ಯಾಸನೂ ಶ್ರೀನಾರಾಯಣನೇ ಎಂದು ಸಾಧಿಸುತ್ತಾ, ಅವರ ಸೇವೆಗಾಗಿ ಭೀಮಾವತಾರವಾಯಿತೆಂದು ಇದರಲ್ಲಿ ವರ್ಣಿಸಿದ್ದಾರೆ.

ಕ್ಷತ್ರಿಯನಾದ ಶ್ರೀಕೃಷ್ಣನೂ ಬ್ರಾಹ್ಮಣನಾದ ವ್ಯಾಸಮುನಿಯೂ ಶ್ರೀಹರಿಯ ಅವತಾರವೇ ಆಗಿದ್ದು, ಪರಸ್ಪರ ಭೇದವಿಲ್ಲದವರಾಗಿದ್ದರೂ ವಿಶೇಷವೆಂಬ ತಮ್ಮ ಶಕ್ತಿಯಿಂದ ಯಾದವಕೃಷ್ಣ, ವೇದವ್ಯಾಸ ಎಂದು ಪ್ರತ್ಯೇಕವಾಗಿ ಇಬ್ಬರೆಂದು ಹೇಳಿಸಿಕೊಂಡವರಾಗಿ ಗುಣಪೂರ್ಣರಾದುದರಿಂದ ಬ್ರಹ್ಮ (ಪರಬ್ರಹ್ಮ) ಎನಿಸಿಕೊಂಡು ಇಬ್ಬರೂ 'ಕೃಷ್ಣ' ಎಂಬ ಹೆಸರುಳ್ಳವರಾಗಿದ್ದಾಗ, ಶ್ರೀಮುಖ್ಯಪ್ರಾಣ ದೇವರು ಭೀಮಾವತಾರ ಮಾಡಿ ಸೇವಿಸಿರುತ್ತಾರೆ. ಅಂತಹ ಶ್ರೀಕೃಷ್ಣ-ವ್ಯಾಸ-ಭೀಮರಿಗೆ ವಂದನೆ. (ಶ್ರೀಹರಿಯು ಶ್ರೀಕೃಷ್ಣ ವ್ಯಾಸರೂಪದಿಂದ ಅವತರಿಸಿದ್ದರೂ ಅದು ನಮ್ಮಂತಹ ಶರೀರವಲ್ಲ. ಪರಂತು ಆತನ ದೇಹವು ಜ್ಞಾನಾಂದಸ್ವರೂಪವೆಂದು 'ಚಿತಿಸುಖವಪುಷಾ ಬೃಂಹಿತಾಭ್ಯಾಂ' ಎಂಬುದರಿಂದ ತಿಳಿಸಿದ್ದಾರೆ.) (ಈ ಶ್ಲೋಕ ಪುರಶ್ಚರಣದಿಂದ ಗುರುಸೇವಾಸಿದ್ಧಿ) ॥ ೨೬ ॥

ಹನುಮಂತನೂ ಭೀಮನೂ ಒಬ್ಬನೇ ಎಂಬುದು ತಪ್ಪು; ಭೀಮನು ಹನುಮಂತನಿಗೆ ಸೋತಿದ್ದಾನೆ ಎಂಬ ಆಕ್ಷೇಪವನ್ನು ಪರಿಹರಿಸುತ್ತಾರೆ:

**ಗಚ್ಛನ್ ಸೌಗಂಧಿಕಾರ್ಥಂ ಪಥಿ ಸ ಹನುಮತಃ ಪುಚ್ಛಮುಚ್ಛಸ್ಯ ಭೀಮಃ ಪ್ರೋದ್ಧರ್ತುಂ ನಾಶಕತ್ಸ ತ್ವಮುಮುರುವಪುಷಾ ಭೀಷಯಾಮಾಸ ಚೇತಿ । ಪೂರ್ಣಜ್ಞಾನೌಜಸೋಸ್ತೇ ಗುರುತಮ ವಪುಷೋಃ ಶ್ರೀಮದಾನಂದತೀರ್ಥ ಕ್ರೀಡಾಮಾತ್ರಂ ತದೇತತ್ ಪ್ರಮದದ ಸುಧಿಯಾಂ ಮೋಹಕ ದ್ವೇಷಭಾಜಾಮ್ ॥ ೨೭ ॥**

ಸೌಗಂಧಿಕಾರ್ಥಂ – ಸೌಗಂಧಿಕವೆಂಬ ಪುಷ್ಪವನ್ನು ತರುವುದಕ್ಕೋಸ್ಕರ, ಗಚ್ಛನ್–ಹೋಗತಕ್ಕ, ಸಃ–ಆ ಭೀಮಸೇನನು, ಪಥಿ–ಮಾರ್ಗದಲ್ಲಿ, ಅಚ್ಛಸ್ಯ–ನಿರ್ಮಲನಾದ, ಹನುಮತಃ–ಹನುಮಂತನ, ಪುಚ್ಛಂ–ಬಾಲವನ್ನು, ಪ್ರೋದ್ಧರ್ತುಂ–ಚೆನ್ನಾಗಿ ಎತ್ತಲು, ನಾಶಕತ್–ಸಮರ್ಥನಾಗಲಿಲ್ಲ, ಇತಿ [ಯತ್]–ಹೀಗೆನ್ನುವ ಯಾವ ಮಾತು ಇದೆಯೋ, ಸತು–ಹನುಮಂತನಾದರೋ, ಉರುವಪುಷಾ–ಶ್ರೇಷ್ಠವಾದ ದೊಡ್ಡ ದೇಹದಿಂದ, ಅಮುಂ–ಈ ಭೀಮನನ್ನು, ಭೀಷಯಾಮಾಸ–ಹೆದರಿಸಿದನು, ಇತಿ ಚ[ಯತ್]–ಹೀಗೆನ್ನುವ ಯಾವ ವಿಷಯ ಇದೆಯೋ, ತತ್ ಏತತ್–ಆ ಈ ಎರಡು ವಿಷಯಗಳು, ದ್ವೇಷಭಾಜಾಂ=ದ್ವೇಷ–ವೈರವನ್ನು, ಭಾಜಾಂ–ಹೊಂದತಕ್ಕ ದೈತ್ಯರಿಗೆ, ಮೋಹಕ–ಭ್ರಮೆಗೊಳಿಸತಕ್ಕ, ಸುಧಿಯಾಂ–ಸದ್ಬುದ್ಧಿಯುಳ್ಳ ತತ್ತ್ವಜ್ಞಾನಿಗಳಿಗೆ, ಪ್ರಮದದ–ಉತ್ತಮ ಸಂತೋಷವನ್ನು ಕೊಡತಕ್ಕ, ಗುರುತಮ–ಗುರುಶ್ರೇಷ್ಠರೆ, ಶ್ರೀಮದಾನಂದತೀರ್ಥ–ಶ್ರೀಮಧ್ವಾಚಾರ್ಯರೇ! ತೇ–ನಿಮ್ಮದಾದ, ಪೂರ್ಣಜ್ಞಾನೌಜಸೋಃ=ಪೂರ್ಣ–ತುಂಬಿದ, ಜ್ಞಾನ–ಜ್ಞಾನ, ಓಜಃ–ಬಲ, ಇವುಗಳುಳ್ಳ, ವಪುಷೋಃ–ಹನುಮದ್ಭೀಮಾವತಾರಗಳ, ಕ್ರೀಡಾಮಾತ್ರಂ–ಕೇವಲ ಆಟ.

ಪ್ರಿಯಪತ್ನಿಯಾದ ದ್ರೌಪದಿಯ ಕೋರಿಕೆಯನ್ನು ಪೂರಯಿಸಲು ಭೀಮಸೇನನು ಪಂಚವರ್ಣದ ಸೌಗಂಧಿಕಪುಷ್ಪವನ್ನು ತರಬೇಕೆಂದು ಗಂಧಮಾದನಕ್ಕೆ ಹೊರಟಾಗ, ಕಿಂಪುರುಷಖಂಡದಲ್ಲಿ ಶ್ರೀರಾಮಧ್ಯಾನತತ್ಪರನಾದ ಹನುಮಂತನ ಬಾಲವು ದಾರಿಯಲ್ಲಿ ಅಡ್ಡಬಿದ್ದಿರಲು, ಕಪಿಯೆಂಬ ತಿರಸ್ಕಾರದಿಂದ: "ಎಲೈ, ನಿನ್ನ ಬಾಲವನ್ನು ತೆಗೆ" ಎಂದು ಹೇಳಿದನು. ಹನುಮಂತನು: "ನಾನು ಮುದುಕನಾಗಿ ಬಾಲವನ್ನೆತ್ತಲಾರದವನಾಗಿರುವೆನು. ನೀನೇ ಎತ್ತಿ ಆಚೆಗಿಟ್ಟು ನಡೆ" ಎನ್ನಲು, ತಾತ್ಸಾರದಿಂದ ಪ್ರಯತ್ನಿಸಿ ಎತ್ತಲು ಅಶಕ್ತನಾಗಲು, ಹನುಮಂತನು ಹಿಂದೆ ಲಂಕೆಗೆ ಹಾರಿದ ತನ್ನ ದೊಡ್ಡ ರೂಪವನ್ನು ತೋರಿ ಹೆದರಿಸಿದನೆಂದು

ಪುರಾಣಚರಿತ್ರೆ ಇದೆ. ಆದರೆ ಈ ಚರಿತ್ರೆ ಶ್ರೀರಾಮ-ಪರಶುರಾಮರ ಯಂದ್ಧ ದಂತೆ ದೈತ್ಯರಿಗೆ ಭ್ರಾಂತಿಯನ್ನುಂಟುಮಾಡತಕ್ಕದ್ದು; ಜ್ಞಾನಿಗಳಿಗೆ ಆನಂದವನ್ನು ಹುಟ್ಟಿಸತಕ್ಕದ್ದು. ಹನುಮಂತನೂ ಭೀಮನೂ ಒಬ್ಬ ಮುಖ್ಯಪ್ರಾಣನ ಅವ ತಾರವೇ. ಆದುದರಿಂದ ಇದೊಂದು ವಿಲಾಸ ಮಾತ್ರ. (ಏಕೆಂದರೆ: ಜ್ಞಾನ ಬಲ ಸ್ವರೂಪನಾದ ಶ್ರೀಮುಖ್ಯಪ್ರಾಣನ ಈ ಎರಡು ಅವತಾರಗಳೂ ಪೂರ್ಣ ಜ್ಞಾನ ಪೂರ್ಣಬಲವುಳ್ಳವಾದುದರಿಂದ ಒಂದವತಾರ ಬಲಿಷ್ಠ, ಇನ್ನೊಂದು ದುರ್ಬಲವೆಂಬುದು ಭ್ರಾಂತಿಯಿಂದ ವರ್ಣಿಸಿದ್ದಾರೆ.) (ಈ ಶ್ಲೋಕಪುರಶ್ಚರಣ ದಿಂದ ಜ್ಞಾನಸಿದ್ಧಿ, ಕಾರ್ಯಸಿದ್ಧಿ.) ॥ ೨೭ ॥

ಸೌಗಂಧಿಕಾಹರಣದ ನೆಪದಿಂದ ಲೋಕೋಪಕಾರವನ್ನು ವರ್ಣಿಸುತ್ತಾರೆ:

**ಬಹ್ವೀಃ ಕೋಟೀರಟೀಕಃ ಕುಟಿಲಕಟುಮತೀನುತ್ಕಟಾಟೋಪ-ಕೋಪಾನ್ ದ್ರಾಕ್ ಚ ತ್ವಂ ಸತ್ವರತ್ವಾಚ್ಛರಣದ ಗದಯಾ ಪೋಥಯಾಮಾಸಿಥಾರೀನ್ । ಉನ್ಮಥ್ಯಾತಥ್ಯಮಿಥ್ಯಾತ್ವವಚನ-ವಚನಾನುತ್ಪಥಸ್ಥಾಂಸ್ತಥಾಽನ್ಯಾನ್ ಪ್ರಾಯಚ್ಛಃ ಸ್ವಪ್ರಿಯಾಯೈ ಪ್ರಿಯತಮಕುಸುಮಂ ಪ್ರಾಣ ತಸ್ಮೈ ನಮಸ್ತೇ ॥ ೨೮ ॥**

ಶರಣದ-ರಕ್ಷಕನಾದ ವಿಷ್ಣುವನ್ನು ಭಕ್ತರಿಗೆ ಕೊಡತಕ್ಕ (ಅಥವಾ ಆಶ್ರಯ ವನ್ನು ಕೊಡತಕ್ಕ), ಪ್ರಾಣ-ಮುಖ್ಯಪ್ರಾಣನೇ! (ಯಃ) ತ್ವಂ-ಯಾವ ನೀನು, ಬಹ್ವೀಃ-ಅನೇಕಗಳಾದ, ಕೋಟೀಃ-ಕೋಟಿಸಂಖ್ಯೆಯುಳ್ಳ, ಕುಟಿಲಕಟು-ಮತೀನ್=ಕುಟಿಲ-ಡೊಂಕಾದ, ಕಟು-ಕ್ರೂರವಾದ, ಮತೀನ್-ಬುದ್ಧಿಯುಳ್ಳ, ಉತ್ಕಟಾಟೋಪಕೋಪಾನ್=ಉತ್ಕಟ-ಬಹಳ ವೃದ್ಧಿಯಾದ, ಆಟೋಪ-ಗರ್ವ, ಕೋಪ-ಸಿಟ್ಟು, ಇವುಗಳುಳ್ಳ, ಅರೀನ್-ವೈರಿಗಳನ್ನು, ದ್ರಾಕ್-ಕೂಡಲೇ, ಅಟೀಕಃ-ಹೊಡೆಯಲು ಆಕ್ರಮಿಸಿದೆ, ತಥಾ-ಹಾಗೆಯೇ, ಗದಯಾ-ಗದೆಯಿಂದ, ಪೋಥಯಾಮಾಸಿಥ - ಸಂಹಾರ ಮಾಡಿದೆ, ತಥಾ-ಅಂತೆಯೇ, ಉತ್ಪಥಸ್ಥಾನ್=ಉತ್ಪಥ-ಅಧರ್ಮಮಾರ್ಗದಲ್ಲಿ, ಸ್ಥಾನ್-ಇರುವ, ಅತಥ್ಯ-ಮಿಥ್ಯಾತ್ವವಚನವಚನಾನ್=ಅತಥ್ಯ-ಸುಳ್ಳಾದ, ಮಿಥ್ಯಾತ್ವವಚನ - ಜಗತ್ತು ಸುಳ್ಳೆಂಬ ವಚನದ, ವಚನಾನ್-ಮಾತುಳ್ಳ, ಅನ್ಯಾನ್-ಬೇರೆ ದೈತ್ಯರನ್ನು, ಸತ್ವರತ್ವಾತ್-ಬೇಗನೇ ಹೊಂದಿ, ಉನ್ಮಥ್ಯ-ಕೊಂದು, ಸ್ವಪ್ರಿಯಾಯೈ=ಸ್ವ-ತನ್ನ, ಪ್ರಿಯಾಯೈ-ಪತ್ನಿಯಾದ ದ್ರೌಪದಿಗೋಸ್ಕರ, ಪ್ರಿಯತಮ-ಕುಸುಮಂ-ಅತ್ಯಂತ ಇಷ್ಟವಾದ ಸೌಗಂಧಿಕಪುಷ್ಪವನ್ನು, ಪ್ರಾಯಚ್ಛಃ-ಕೊಟ್ಟಿರುತ್ತೀ, ತಸ್ಮೈ-ಆ, ತೇ-ನಿನಗೆ, ನಮಃ-ನಮಸ್ಕಾರ.

ಜ್ಞಾನೋಪದೇಶದಿಂದ ಭಕ್ತರಿಗೆ ಮೋಕ್ಷದಲ್ಲಿ ರಕ್ಷಕನಾದ ಶ್ರೀಹರಿಯನ್ನು ಕೊಡತಕ್ಕ ವಾಯುದೇವನೇ! ನೀನು ಗಂಧಮಾದನದಲ್ಲಿ ಪುಷ್ಪವನ್ನು ಕೊಯ್ಯು ವಾಗ ತಡೆದ ಕ್ರೋಧವಶರೆಂಬ ವಕ್ರಬುದ್ಧಿಗಳಾದ ದೈತ್ಯರ ಮೇಲೆ ಬಿದ್ದು, ಗದೆಯಿಂದ ಪುಡಿಮಾಡಿದೆ. ಪ್ರಪಂಚವೇ ಸುಳ್ಳೆಂದು ಸಾಧಿಸುವ ಅಧರ್ಮಿಷ್ಠ ರಾದ ಕೆಲವು ದೈತ್ಯರನ್ನು ವಾದದಲ್ಲಿ ಸೋಲಿಸಿ, ದ್ರೌಪದೀದೇವಿಗೆ ಪುಷ್ಪವನ್ನು ತಂದಿತ್ತೆ. ಹೀಗೆ ಲೋಕಕಂಟಕರನ್ನು ಕೊಂದು ಲೋಕೋಪಕಾರ ಮಾಡಿದೆ, ದುರ್ಮತವನ್ನು ನಿರಾಕರಿಸಿದೆ. (ಎಂದು ಭಾರತದಲ್ಲಿ ಸೌಗಂಧಿಕಯಾತ್ರೆ ಯಲ್ಲಿ ಎರಡು ಸಲ ಹೇಳಿದ ದೈತ್ಯಯುದ್ಧವನ್ನು ವರ್ಣಿಸಿದ್ದಾರೆ.) (ಈ ಶ್ಲೋಕ ಪುರಶ್ಚರಣದಿಂದ ಮಿಥ್ಯಾಪವಾದ ಪರಿಹಾರ.) ॥ ೨೮ ॥

ಮುಂದಿನ ಶ್ಲೋಕಗಳಲ್ಲಿ ಶ್ರೀಮಧ್ವಾವತಾರದ ಪ್ರಯೋಜನವನ್ನು ಹೇಳುವುದಕ್ಕಾಗಿ ಈ ಶ್ಲೋಕದಲ್ಲಿ ಭೀಮನಾಗಿದ್ದಾಗ ಕೊಲ್ಲಲ್ಪಟ್ಟ ಮಣಿಮಂತನ ದುಷ್ಕರ್ಮವನ್ನು ವರ್ಣಿಸುತ್ತಾರೆ:

**ದೇಹಾದುತ್ಕ್ರಾಮಿತಾನಾಮಧಿಪತಿರಸತಾಮಕ್ರಮಾದ್ವಕ್ರಬುದ್ಧಿಃ ಕ್ರುದ್ಧಃ ಕ್ರೋಧೈಕವಶ್ಯಃ ಕ್ರಿಮಿರಿವ ಮಣಿಮಾನ್ ದುಷ್ಕೃತೀ ನಿಷ್ಕ್ರಿಯಾರ್ಥಮ್ । ಚಕ್ರೇ ಭೂಚಕ್ರಮೇತ್ಯ ಕ್ರಕಚಮಿವ ಸತಾಂ ಚೇತಸಃ ಕಷ್ಟಶಾಸ್ತ್ರಂ ದುಸ್ತರ್ಕಂ ಚಕ್ರಪಾಣೇರ್ಗುಣಗಣವಿರಹಂ ಜೀವತಾಂ ಚಾಧಿಕೃತ್ಯ ॥ ೨೯ ॥**

ದೇಹಾತ್–ಶರೀರದ ದೆಸೆಯಿಂದ, ಅಕ್ರಮಾತ್–ಒಬ್ಬನ ಮೇಲೆ ಮತ್ತೊಬ್ಬ ನೆಂಬ ಕ್ರಮವನ್ನು ಬಿಟ್ಟು (ಒಮ್ಮೆಗೇ), ಉತ್ಕ್ರಾಮಿತಾನಾಂ–ಹೊರಡಿಸಲ್ಪಟ್ಟ (ಅಗಲಿಸಲ್ಪಟ್ಟ), ಅಸತಾಂ–ದುಷ್ಟರಿಗೆ, ಅಧಿಪತಿಃ–ಸ್ವಾಮಿಯಾದ, ವಕ್ರಬುದ್ಧಿಃ– ಕುಟಿಲ ಬುದ್ಧಿಯುಳ್ಳ, ಕ್ರುದ್ಧಃ–ಕೋಪವುಳ್ಳ, ಕ್ರಿಮಿರಿವ–ಹುಳುವಿನಂತೆ, ಕ್ರೋಧೈಕವಶ್ಯಃ = ಕ್ರೋಧ–ಕೋಪಕ್ಕೆ, ಏಕವಶ್ಯಃ–ಮುಖ್ಯ ಅಧೀನನಾದ, ದುಷ್ಕೃತೀ–ಪಾಪವುಳ್ಳ, ಮಣಿಮಾನ್–ಮಣಿಮಂತನೆಂಬ ದೈತ್ಯನು, ನಿಷ್ಕ್ರಿ- ಯಾರ್ಥಂ–ಪ್ರತಿಯಾದ ಅಪಕಾರಕ್ಕೋಸ್ಕರ, ಭೂಚಕ್ರಂ–ಭೂಮಂಡಲವನ್ನು ಕುರಿತು, ಏತ್ಯ–ಬಂದು, ಚಕ್ರಪಾಣೇಃ–ಕೈಯಲ್ಲಿ ಸುದರ್ಶನ ಚಕ್ರವುಳ್ಳ ಶ್ರೀ ನಾರಾಯಣನಿಗೆ, ಗುಣಗಣವಿರಹಂ=ಗುಣಗಣ–ಜ್ಞಾನಾನಂದಾದಿ ಗುಣಗಳ ಸಮೂಹದ, ವಿರಹಂ–ವಿಯೋಗ (ಇಲ್ಲದಿರುವಿಕೆ) ವನ್ನು, ಜೀವತಾಂ ಚ–ಜೀವ ಸ್ವರೂಪತ್ವವನ್ನೂ (ಜೀವನಿಂದ ಅಭೇದವನ್ನೂ ಕೂಡ), ಅಧಿಕೃತ್ಯ–ಉದ್ದೇಶಿಸಿ, ಸತಾಂ – ಸಜ್ಜನರ, ಚೇತಸಃ – ಮನಸ್ಸಿಗೆ, ಕ್ರಕಚಮಿವ – ಗರಗಸದಂತಿರುವ,

ದುಸ್ತರ್ಕಂ–ವೇದವಿರುದ್ಧ ತರ್ಕಗಳುಳ್ಳ, ಕಷ್ಟಶಾಸ್ತ್ರಂ–ಕಷ್ಟಕರವಾದ ಶಾಸ್ತ್ರವನ್ನು, ಚಕ್ರೇ–ಮಾಡಿದನು ॥ ೨೯ ॥

ಭೀಮಸೇನನು ಸೌಗಂಧಿಕವನ್ನು ತರುವಾಗ ಯುದ್ಧದಲ್ಲಿ ಮಡಿದ ದೈತ್ಯರ ಅಧೀಶ್ವರನಾದ ಮಣಿಮಂತನು ಮೃತಪಟ್ಟವನಾಗಿ, ಪೂರ್ವವೈರವನ್ನು ಮನಸ್ಸಿನಲ್ಲಿಟ್ಟುಕೊಂಡು, ಆ ಭೀಮಸೇನನಿಗೆ ಪ್ರತೀಕಾರ ಮಾಡಬೇಕೆಂದು ಭೂಮಿಯಲ್ಲಿ ಹುಟ್ಟಿ, ಭೀಮಸೇನನಿಗೆ ಆರಾಧ್ಯದೇವತೆಯಾದ ಶ್ರೀಹರಿಯು ಸರ್ವೋತ್ತಮತ್ವ ಸ್ವತಂತ್ರತ್ವ ಮೊದಲಾದ ಗುಣಗಳಿಲ್ಲದವನೆಂದೂ, ಜೀವರೂ ಪರಮಾತ್ಮನೂ ಒಬ್ಬನೇ ಎಂದು ಸಾಧಿಸುವ ದುಷ್ಟ ತರ್ಕಗಳಿರುವ ಶಾಸ್ತ್ರವನ್ನು ಮಾಡಿ, ಸಜ್ಜನರ ಮನಸ್ಸಿಗೆ ದುಃಖವನ್ನು ಉಂಟುಮಾಡಿದನು. ಇವರಿಂದ ಸಜ್ಜನರ ರಕ್ಷಕನೂ ಹರಿಯ ಮುಖ್ಯ ದಾಸನೂ ಆದ ಭೀಮಸೇನನಿಗೆ ದುಃಖ ಕೊಟ್ಟಂತಾಯಿತು. (ಇಂತಹ ಶಾಸ್ತ್ರವೆಂದರೆ ಶ್ರೀಶಂಕರಕೃತ ಅದ್ವೈತಮತವೆಂದು ಹೇಳುತ್ತಾರೆ.) (ಈ ಶ್ಲೋಕಪುರಶ್ಚರಣದಿಂದ ಜನವಶೀಕರಣಸಿದ್ಧಿ.) ॥

**ತದ್ದುಷ್ಪ್ರೇಕ್ಷಾನುಸಾರಾತ್ ಕತಿಪಯ ಕುನರೈರಾದೃತೋಽನ್ಯೈ-ರ್ವಿಸೃಷ್ಟೋ ಬ್ರಹ್ಮಾಽಹಂ ನಿರ್ಗುಣೋಽಹಂ ವಿತಥಮಿದಮಿತಿ ಹ್ಯೇಷ ಪಾಷಂಡವಾದಃ । ತದ್ಯುಕ್ತ್ಯಾಭಾಸಜಾಲಪ್ರಸರವಿಷತರೂದ್ದಾಹ-ದಕ್ಷಪ್ರಮಾಣಜ್ವಾಲಾಮಾಲಾಧರೋಽಗ್ನಿಃ ಪವನ ವಿಜಯತೇ ತೇಽವತಾರಸ್ತೃತೀಯಃ ॥ ೩೦ ॥**

ಅಹಂ–ನಾನು, ಬ್ರಹ್ಮಾ–ಪರಬ್ರಹ್ಮನು, ಅಹಂ–ನಾನು, ನಿರ್ಗುಣಃ–ಕರ್ತೃತ್ವಾದಿ ಗುಣಗಳಿಲ್ಲದವನು, ಇದಂ–ಪ್ರತ್ಯಕ್ಷ ತೋರುವ ಈ ಪ್ರಪಂಚವು, ವಿತಥಂ–ಅಸತ್ಯ, ಇತಿ–ಎಂದು, ಏಷಃ–ಈ, ಪಾಷಂಡವಾದಃ–ಪಾಷಂಡ–ವೇದವಿರೋಧಿಗಳ, ವಾದಃ–ವಚನವು, ಕತಿಪಯಕುನರೈಃ–ಕೆಲವು ದುಷ್ಟ ಜನರಿಂದ, ತದ್ದುಷ್ಪ್ರೇಕ್ಷಾನುಸಾರಾತ್–ತತ್–ಆ ಐಕ್ಯಮತಪ್ರವರ್ತಕನ, ದುಷ್ಪ್ರೇಕ್ಷಾ–ದುಷ್ಟಬುದ್ಧಿಯ, ಅನುಸಾರಾತ್–ಅನುಸರಣೆಯ ದೆಸೆಯಿಂದ, ಆದೃತಃ–ಸ್ವೀಕರಿಸಲ್ಪಟ್ಟಿತು, ತದ್ಯುಕ್ತ್ಯಾಭಾಸ...... ಧರೋಽಗ್ನಿಃ–ತತ್ ಆ ಐಕ್ಯಮತಪ್ರವರ್ತಕನ (ಶ್ರೀಶಂಕರರ,) ಯುಕ್ತ್ಯಾಭಾಸ–ಯುಕ್ತಿಯಂತೆ ತೋರುವ (ದುಷ್ಟತರ್ಕಗಳ), ಜಾಲ–ಸಮೂಹದ, ಪ್ರಸರ–ವಿಸ್ತಾರವಾದ, ವಿಷತರು–ವಿಷವೃಕ್ಷದ, ಉದ್ದಾಹ–ಚೆನ್ನಾಗಿ ಸುಡುವಿಕೆಯಲ್ಲಿ, ದಕ್ಷ–ಸಮರ್ಥಗಳಾದ, ಪ್ರಮಾಣ–ಶ್ರುತಿಸ್ಮೃತ್ಯಾದಿ ಪ್ರಮಾಣವಚನಗಳೆಂಬ, ಜ್ವಾಲಾಮಾಲಾ–ಜ್ವಾಲೆಗಳ ಪಂಕ್ತಿಗಳನ್ನು, ಧರಃ–

ಧರಿಸಿದ, ಅಗ್ನಿಃ – ಬೆಂಕಿಯಾದ, ಪವನ – ಮುಖ್ಯಪ್ರಾಣನೇ! ತೇ – ನಿನ್ನ, ತೃತೀಯಃ–ಮೂರನೆಯದಾದ, ಅವತಾರಃ–ಶ್ರೀಮಧ್ವಾವತಾರವು, ವಿಜ-ಯತೇ–ಸರ್ವೋತ್ಕೃಷ್ಟವಾಗಿದೆ.

'ನಾನೇ ದೇವರು, ನಾನು ನಿರ್ಗುಣ, ಜಗತ್ತು ಸುಳ್ಳು' ಎಂದು ಸಾಧಿಸುವ ಈ ಅದ್ವೈತಮತವನ್ನು ತಮಸ್ಸಿಗೆ ಯೋಗ್ಯರಾದ ಕೆಲವರು ಒಪ್ಪಿಕೊಂಡರು; ಮೋಕ್ಷಯೋಗ್ಯರಾದವರು ಒಪ್ಪಲಿಲ್ಲ. ಅಂತಹ ದುಸ್ತರ್ಕಪೂರ್ಣವಾದ ಐಕ್ಯ ಮತವೆಂಬ ವಿಷವೃಕ್ಷವನ್ನು ಸುಡುವುದಕ್ಕಾಗಿ ವೇದಪುರಾಣಾದಿ ಪ್ರಮಾಣ ವಚನಗಳೆಂಬ ಜ್ವಾಲೆಯುಳ್ಳ ಅಗ್ನಿಯಂತಿರುವ ಶ್ರೀಮಧ್ವಾವತಾರವೆಂಬ ವಾಯುದೇವರ ಮೂರನೆಯ ಅವತಾರ ಸರ್ವೋತ್ತಮವಾಗಿದೆ. (ಈ ವರ್ಣನೆ ಯಿಂದ ಮಣಿಮಂತನು ಮಾಡಿದ ಪ್ರತ್ಯಪಕಾರವನ್ನು ಪರಿಹರಿಸಿ, ಹರಿ ಸರ್ವೋ ತ್ತಮನೆಂದು ಸಾಧಿಸಿ, ಸಜ್ಜನರ ಮನಸ್ಸಿನ ದುಃಖವನ್ನು ಕಳೆಯುವುದೇ ಶ್ರೀ ಮಧ್ವಾವತಾರದ ಪ್ರಯೋಜನವೆಂದು ಭಾವ.) (ಈ ಶ್ಲೋಕಪುರಶ್ಚರಣದಿಂದ ಪ್ರತಿವಾದಿ ಜಯಸಿದ್ಧಿ.) ॥ ೩೦ ॥

**ಆಕ್ರೋಶಂತೋ ನಿರಾಶಾ ಭಯಭರವಿವಶಸ್ವಾಶಯಾಶ್ಛಿನ್ನ-ದರ್ಪಾ ವಾಶಂತೋ ದೇಶನಾಶಸ್ತ್ವಿತಿ ಬತ ಕುಧಿಯಾಂ ನಾಶ-ಮಾಶಾ ದಶಾಽಶು । ಧಾವಂತೋಽಶ್ಲೀಲಶೀಲಾ ವಿತಥಶಪಥ-ಶಾಪಾಶಿವಾಃ ಶಾಂತಶೌರ್ಯಾಸ್ತ್ವದ್ವ್ಯಾಖ್ಯಾಸಿಂಹನಾದೇ ಸಪದಿ ದದೃಶಿರೇ ಮಾಯಿಗೋಮಾಯವಸ್ತೇ ॥ ೩೧ ॥**

(ಮಧ್ವಾಚಾರ್ಯ–ಮಧ್ವಾಚಾರ್ಯರೇ,) ತ್ವದ್ವ್ಯಾಖ್ಯಾಸಿಂಹನಾದೇ=ತ್ವತ್–ನಿಮ್ಮ, ವ್ಯಾಖ್ಯಾ–ವ್ಯಾಖ್ಯಾನ (ಉಪದೇಶ) ವೆಂಬ, ಸಿಂಹನಾದೇ–ಸಿಂಹಗರ್ಜನೆಯು (ಶ್ರೂಯಮಾಣೇ ಸತಿ–ಕೇಳಲ್ಪಡುತ್ತಿರಲು), ತೇ–ನಿಮ್ಮಿಂದ, (ಪರಾ-ಜಿತಾಃ–ಸೋಲಿಸಲ್ಪಟ್ಟ,) ಮಾಯಿಗೋಮಾಯವಃ–ಮಾಯಾವಾದಿಗಳೆಂಬ ನರಿಗಳು, ಆಕ್ರೋಶಂತಃ (ಸಂತಃ)–ನಮಗೇನು ಗತಿಯೆಂದು ಕೂಗುತ್ತಿರುವವ ರಾಗಿ, ನಿರಾಶಾಃ (ಸಂತಃ)–ಜಯದಲ್ಲಿ ಆಸೆ ಇಲ್ಲದವರಾಗಿ, ಭಯಭರವಿವಶ-ಸ್ವಾಶಯಾಃ(ಸಂತಃ)=ಭಯ–ಅಂಜಿಕೆಯ, ಭರ–ಸಮೃದ್ಧಿಯಿಂದ, ವಿವಶ–ಪರಾ ಧೀನವಾದ, ಸ್ವಾಶಯಾಃ–ತಮ್ಮ ಅಭಿಪ್ರಾಯವುಳ್ಳವರಾಗಿ, ಛಿನ್ನದರ್ಪಾಃ (ಸಂತಃ)=ಛಿನ್ನ–ಹೋಗಲ್ಪಟ್ಟ,ದರ್ಪಾಃ–ಅಹಂಕಾರವುಳ್ಳವರಾಗಿ, ಕುಧಿಯಾಂ–ಕೆಟ್ಟ ಬುದ್ಧಿಯುಳ್ಳವರಿಗೆ, ದೇಶನಾಶಃ–ದೇಶ (ಸ್ಥಾನ) ಕ್ಕೆ ಹಾನಿ, ಬತ–ಕಷ

ಇತಿ–ಎಂದು, ನಾಶಂ–ಮರಣವನ್ನು, ವಾಶಂತಃ (ಸಂತಃ)–ಕೂಗತಕ್ಕವರಾಗಿ, ಆಶಾದಶ–ಹತ್ತು ದಿಕ್ಕುಗಳನ್ನು ಕುರಿತು, ಆಶು–ಬೇಗನೇ, ಧಾವಂತಃ(ಸಂತಃ)–ಓಡುವವರಾಗಿ, ಅಶ್ಲೀಲಶೀಲಾಃ (ಸಂತಃ)=ಅಶ್ಲೀಲ–ನಿಂದ್ಯವಾದ, ಶೀಲಾಃ–ಶೀಲವುಳ್ಳವರಾಗಿ, ವಿತಥಶಪಥಶಾಪಾಶಿವಾಃ = ವಿತಥ – ಸುಳ್ಳಾದ, ಶಪಥ–ಪ್ರತಿಜ್ಞೆ, ಶಾಪ–ಶಪಿಸುವುದು, ಇವುಗಳುಳ್ಳ, ಅಶಿವಾಃ–ಅಮಂಗಳರಾದ (ಅಥವಾ ಸುಳ್ಳಾದ ಶಪಥಶಾಪಗಳಿಂದ ಅಮಂಗಳರಾದವರಾಗಿ), ಶಾಂತ-ಶೌರ್ಯಾಃ (ಸಂತಃ) = ಶಾಂತ–ನಷ್ಟವಾದ. ಶೌರ್ಯಾಃ–ಪರಾಕ್ರಮವುಳ್ಳವರಾಗಿ, ಸಪದಿ–ಆ ಕ್ಷಣದಲ್ಲಿ, ದದೃಶಿರೇ–ನೋಡಲ್ಪಟ್ಟರು.

ಶ್ರೀಮಧ್ವಾಚಾರ್ಯರು ತತ್ತ್ವೋಪದೇಶವನ್ನು ಮಾಡುವಾಗ, ಸಿಂಹ ಗರ್ಜನವನ್ನು ಕೇಳಿದಾಗ ನರಿಗಳು ಕಂಗೆಟ್ಟೋಡುವಂತೆ. ಮಾಯಾವಾದಿಗಳು ತಮಗೆ ಜಯವಿಲ್ಲವೆಂದು ನಿರಾಶರೂ, ಅಂಜಿದವರೂ, ಅಹಂಕಾರ ಬಿಟ್ಟವರೂ, ಇನ್ನು ದೇಶವನ್ನೇ ಬಿಡಬೇಕಾಯಿತೆಂದು ಕೂಗುವವರೂ, ಅನೇಕ ಸುಳ್ಳು ಪ್ರತಿಜ್ಞೆಗಳನ್ನು ಮಾಡಿ ಶಪಿಸುತ್ತಿರುವವರೂ ಆಗಿರುವುದನ್ನು ಜನರು ನೋಡಿದರು. (ಈ ಶ್ಲೋಕಪುರಶ್ಚರಣದಿಂದ ಶತ್ರೂಚ್ಚಾಟನ.) ॥ ೩೧ ॥

**ತ್ರಿಷ್ವಪ್ಯೇವಾವತಾರೇಷ್ವರಿಭಿರಪಘೃಣಂ ಹಿಂಸಿತೋ ನಿರ್ವಿ-ಕಾರಃ ಸರ್ವಜ್ಞಃ ಸರ್ವಶಕ್ತಿಃ ಸಕಲಗುಣಗಣಾಪೂರ್ಣರೂಪ-ಪ್ರಗಲ್ಭಃ । ಸ್ವಚ್ಛಃ ಸ್ವಚ್ಛಂದಮೃತ್ಯುಃ ಸುಖಯಸಿ ಸುಜನಂ ದೇವ ಕಿಂ ಚಿತ್ರಮತ್ರ ತ್ರಾತಾ ಯಸ್ಯ ತ್ರಿಧಾಮಾ ಜಗದುತ ವಶಗಂ ಕಿಂಕರಾಃ ಶಂಕರಾದ್ಯಾಃ ॥ ೩೨ ॥**

ತ್ರಿಷು–ಹನುಮದ್ಭೀಮಮಧ್ವರೆಂಬ ಮೂರು, ಅವತಾರೇಷು–ಅವತಾರಗಳಲ್ಲಿ, ಅರಿಭಿಃ–ರಾವಣದುರ್ಯೋಧನಶಂಕರಾದಿ ಶತ್ರುಗಳಿಂದ, ಅಪಘೃಣಂ–ಕರುಣೆಯಿಲ್ಲದೆ, ಹಿಂಸಿತೋಽಪಿ–ಹೊಡೆಯಲ್ಪಟ್ಟವನಾದರೂ, ನಿರ್ವಿಕಾರಃ–ಯಾವ ವಿಕಾರವೂ ಇಲ್ಲದ, ಸರ್ವಜ್ಞಃ–ಸಮಸ್ತವನ್ನು ತಿಳಿದ, ಸರ್ವಶಕ್ತಿಃ–ಸಮಸ್ತ ಕಾರ್ಯಗಳಲ್ಲಿ ಸಾಮರ್ಥ್ಯವುಳ್ಳ, ಸಕಲಗುಣಗಣಾಪೂರ್ಣರೂಪ-ಪ್ರಗಲ್ಭಃ=ಸಕಲ–ಸಮಸ್ತಗಳಾದ, ಗುಣ–ಬಲಜ್ಞಾನಾನಂದಾದಿ ಗುಣಗಳ, ಗಣ–ಸಮೂಹಗಳಿಂದ, ಆಪೂರ್ಣ–ಪರಿಪೂರ್ಣವಾದ, ರೂಪ–ಸ್ವರೂಪದಿಂದ, ಪ್ರಗಲ್ಭಃ–ಪ್ರೌಢನಾದ, ಸ್ವಚ್ಛಂದಮೃತ್ಯುಃ=ಸ್ವಚ್ಛಂದ–ತನ್ನ ಇಚ್ಛೆಯ ಪ್ರಕಾರವಿರುವ (ಸ್ವಾಧೀನವಾದ), ಮೃತ್ಯುಃ–ಮರಣವುಳ್ಳ, ದೇವ–ಮುಖ್ಯಪ್ರಾಣನೇ!

ತ್ವಂ–ನೀನು. ಸುಜನಂ–ಸಜ್ಜನರನ್ನು, ಸುಖಯಸಿ–ಆನಂದಪಡಿಸುತ್ತೀ. (ಇತಿ ಯತ್–ಹೀಗೆನ್ನುವ ಯಾವ ಮಾತು,) ಅತ್ರ–ಈ ಸಜ್ಜನರನ್ನು ಸುಖಪಡಿಸು ವುದರಲ್ಲಿ, ಕಿಂ ಚಿತ್ರಂ–ಏನು ಆಶ್ಚರ್ಯ?

(ಅದನ್ನೇ ವಿವರಿಸುತ್ತಾರೆ:) ಯಸ್ಯ–ಯಾವ ನಿನಗೆ, ತ್ರಿಧಾಮಾ–ವೈಕುಂಠ-ಅನಂತಾಸನ-ಶ್ವೇತದ್ವೀಪಗಳೆಂಬ ಮೂರು ಸ್ಥಾನಗಳುಳ್ಳ ಶ್ರೀವಿಷ್ಣುವು, ತ್ರಾತಾ–ರಕ್ಷಕನೋ, ಉತ–ಮತ್ತು, ಜಗತ್–ಸ್ಥಿರ-ಚರ ಪ್ರಪಂಚವು, ವಶಗಂ–ಅಧೀನವಾದುದೋ, ಶಂಕರಾದ್ಯಾಃ=ಶಂಕರ–ರುದ್ರದೇವರೇ, ಆದ್ಯಾಃ–ಮೊದ ಲಾಗಿರುವ ದೇವತೆಗಳು, ಕಿಂಕರಾಃ–ಸೇವಕರೋ. (ಅಂತಹ ನಿನಗೆ ಸಜ್ಜನರನ್ನು ಆನಂದಗೊಳಿಸುವುದರಲ್ಲಿ ಆಶ್ಚರ್ಯವೇನೂ ಇಲ್ಲ.)

ವಾಯುದೇವನು ಹನುಮದವತಾರದಲ್ಲಿ ರಾವಣನು ಬಾಲಕ್ಕೆ ಬೆಂಕಿ ಕೊಟ್ಟಾ ಗಲು, ಮುಷ್ಟಿಯಿಂದ ಹೊಡೆದಾಗಲು, ಯಾವ ಅಂಗವಿಕಾರವೂ ಇಲ್ಲದೆ ಇದ್ದವನು;ಭೀಮಾವತಾರದಲ್ಲಿ ಕೌರವನು ಸರ್ಪಗಳಿಂದ ಕಚ್ಚಿಸಿದಾಗಲು,ವಿಷಪೂ ರಿತ ಭಕ್ಷ್ಯ ತಿನ್ನಿಸಿದಾಗಲು, ಗದೆಯಿಂದ ಹೊಡೆದಾಗಲು, ಯಾವ ವಿಕಾರವೂ ಇಲ್ಲದೆ ಇದ್ದವನು. ಶ್ರೀಮಧ್ವಾವತಾರದಲ್ಲಿ ಮಣಿಮಂತನು ಘಟಸರ್ಪವಾಗಿ ಕಚ್ಚಿದಾಗಲು, ಯತಿರೂಪದಿಂದ ವಾದ ಮಾಡಿದಾಗಲು, ಯಾವ ವಿಕಾರವೂ ಇಲ್ಲದೆ ಇದ್ದವನೇ, (ಎಂಬುದರಿಂದ ಈ ಮೂರು ಅವತಾರಗಳಲ್ಲಿಯೂ ರಾವ ಣಾದಿಗಳು ಅನ್ಯಾಯವಾಗಿ ನಿರ್ದಯರಾಗಿ ಈತನನ್ನು ಹಿಂಸೆಪಡಿಸಿದರೆಂದೂ, ಆಗಲೂ ಇವನಲ್ಲಿ ಯಾವ ವಿಕಾರವೂ ತೋರದೆ ಅತಿಗಾಂಭೀರ್ಯವುಳ್ಳವನಾದಿ ದ್ದನೆಂದೂ ತಿಳಿಸಿದ್ದಾರೆ.) ಇಂತಹ ಸರ್ವಜ್ಞ-ಸರ್ವಶಕ್ತ-ಸರ್ವಗುಣಪೂರ್ಣ-ಸ್ವಾಧೀನಮೃತ್ಯುವಾದ ನೀನು ಸಜ್ಜನರನ್ನು ಆನಂದಗೊಳಿಸುವುದೆಂಬುದು, ವಿಷ್ಣುವಿನಿಂದ ರಕ್ಷಿಸಲ್ಪಡುವ ಜಗತ್ತನ್ನು ಸ್ವಾಧೀನದಲ್ಲಿಟ್ಟುಕೊಂಡ ರುದ್ರಾದಿ ಗಳಿಂದ ಸೇವಿಸಲ್ಪಡುವ ನಿನಗೆ ಆಶ್ಚರ್ಯವಲ್ಲ. (ಈ ಶ್ಲೋಕಪುರಶ್ಚರಣದಿಂದ ಅಪಮೃತ್ಯು ಪರಿಹಾರ ಮತ್ತು ಸರ್ವರಿಂದಲು ಶ್ರೇಷ್ಠತ್ವಸಿದ್ಧಿ.) ॥ ೩೨ ॥

**ಉದ್ಯನ್ಮಂದಸ್ಮಿತಶ್ರೀಮೃದುಮಧುಮಧುರಾಲಾಪಪೀಯೂಷ-ಧಾರಾಪೂರಾಸೇಕೋಪಶಾಂತಾಸುಖಸುಜನಮನೋಲೋಚನಾ-ಪೀಯಮಾನಮ್ । ಸಂದ್ರಕ್ಷ್ಯೇ ಸುಂದರಂ ಸಂದುಹದಿಹ ಮಹ-ದಾನಂದಮಾನಂದತೀರ್ಥ ಶ್ರೀಮದ್ವಕ್ತ್ರೇಂದುಬಿಂಬಂ ದುರಿತನು-ದುದಿತಂ ನಿತ್ಯದಾಹಂ ಕದಾ ನು ॥ ೩೩ ॥**

ನಿತ್ಯದ–ನಿತ್ಯನಾದ ವಿಷ್ಣುವನ್ನು ಭಕ್ತರಿಗೆ ಕೊಡತಕ್ಕ, ಶ್ರೀಮದಾನಂದ-ತೀರ್ಥ–ಶ್ರೀಮದಾನಂದತೀರ್ಥಭಗವತ್ಪಾದರೇ! (ತವ–ನಿನ್ನ,) ಉದ್ಯನ್ಮಂದ-ಸ್ಮಿತಶ್ರೀಮೃದು=ಉದ್ಯತ್–ಉತ್ಪನ್ನವಾದ, ಮಂದಸ್ಮಿತ–ಕಿರುನಗೆಯ, ಶ್ರೀ–ಕಾಂತಿಯಿಂದ, ಮೃದು–ಕೋಮಲವಾದ, ಮಧುಮಧುರಾ....ಪೀಯೂಷಮಾ-ನಂ=ಮಧು–ಜೇನಿನಂತೆ, ಮಧುರ–ಸಿಹಿಯಾದ (ಮನೋಹರವಾದ), ಆಲಾ-ಪ–ಮಾತುಗಳೆಂಬ, ಪೀಯೂಷ–ಅಮೃತದ, ಧಾರಾ–ಧಾರೆಗಳ, ಪೂರ–ಪ್ರವಾಹದ, ಆಸೇಕ–ಅಭಿಷೇಕದಿಂದ, ಉಪಶಾಂತ–ನಷ್ಟವಾದ, ಅಸುಖ–ದುಃಖವುಳ್ಳ, ಸುಜನ–ಸಜ್ಜನರ, ಮನಃ–ಮನಸ್ಸು, ಲೋಚನ–ಕಣ್ಣುಗಳು ಇವುಗಳಿಂದ, ಆಪೀಯಮಾನಂ–ಅತ್ಯಾದರದಿಂದ ಅನುಭವಿಸಲ್ಪಡುವ (ನೋಡಲ್ಪಡುವ), ಸುಂದರಂ–ಮನೋಹರವಾದ, ಇಹ–ಈ ಸೇವಕಜನರಲ್ಲಿ, ಮಹದಾನಂದಂ–ಬಹಳ ಸುಖವನ್ನು, ಸಂದುಹತ್–ಕೊಡತಕ್ಕ, ದುರಿತನುತ್–ಪಾಪವನ್ನು ಕಳೆಯತಕ್ಕ, (ನಿತ್ಯದಾ–ಇಂಬ ಪಾಠದಲ್ಲಿ: ಎಂದೆಂದೂ,) ಉದಿತಂ–ಪ್ರಸನ್ನವಾದ, ಶ್ರೀಮತ್–ಕಾಂತಿಯುಳ್ಳ, ವಕ್ತ್ರೇಂದುಬಿಂಬಂ–ಮುಖಚಂದ್ರನನ್ನು, ಅಹಂ–ನಾನು, ಕದಾನು–ಯಾವಾಗ, ಸಂದ್ರಕ್ಷ್ಯೇ–ನೋಡುವೆನು ?

ಆಚಾರ್ಯರ ಆ ಮಂದಹಾಸಯುಕ್ತವಾದ, ಆ ಮಧುರ ವಚನಾಮೃತದಿಂದ ಸಜ್ಜನರ ದುಃಖವನ್ನು ಕಳೆಯುವ, ಜನರ ಕಣ್ಮನಗಳಿಗೆ ಅತ್ಯಾನಂದಕರವಾದ ಚಂದ್ರನಂತೆ ಸುಂದರವಾದ ಪಾಪಪರಿಹಾರಕವಾದ ಆ ಮುಖದರ್ಶನವು ಪ್ರತಿ ದಿನವೂ ಎಂದಿಗೆ ಆದೀತು ? (ಈ ಶ್ಲೋಕಪುರಶ್ಚರಣದಿಂದ ರೂಪಲಾವಣ್ಯ ವೃದ್ಧಿ.) ॥ ೩೩ ॥

**ಪ್ರಾಚೀನಾಚೀರ್ಣಪುಣ್ಯೋಚ್ಚಯಚತುರತರಾಚಾರತಶ್ಚಾರು-ಚಿತ್ತಾನತ್ಯುಚ್ಚಾಂ ರೋಚಯಂತೀಂ ಶ್ರುತಿಚಿತವಚನಾಂ ಶ್ರಾವ-ಕಾಂಶ್ಚೋದ್ಯಚುಂಚೂನ್ । ವ್ಯಾಖ್ಯಾಮುತ್ಖಾತದುಃಖಾಂ ಚಿರ-ಮುಚಿತಮಹಾಚಾರ್ಯ ಚಿಂತಾರತಾಂಸ್ತೇ ಚಿತ್ರಾಂ ಸಚ್ಛಾಸ್ತ್ರಕರ್ತ-ಶ್ಚರಣಪರಿಚರಾಂಛ್ರಾವಯಾಸ್ಮಾಂಶ್ಚ ಕಿಂಚಿತ್ ॥ ೩೪ ॥**

ಸಚ್ಛಾಸ್ತ್ರಕರ್ತ–ನಿರ್ದುಷ್ಟ ಶಾಸ್ತ್ರವನ್ನು ಮಾಡಿರುವ, ಉಚಿತಮಹಾಚಾರ್ಯ–ಯೋಗ್ಯರೂ ಶ್ರೇಷ್ಠರೂ ಆದ ಶ್ರೀಮದಾಚಾರ್ಯರೇ! ಪ್ರಾಚೀನಾಚೀರ್ಣ .. ಚಾರತಃ=ಪ್ರಾಚೀನ–ಪುರಾತನಗಳಾದ ಜನ್ಮಗಳಲ್ಲಿ, ಆಚೀರ್ಣ–ಆಚರಿಸಲ್ಪಟ್ಟ,

ಪುಣ್ಯ–ಪುಣ್ಯಗಳ, ಉಚ್ಚಯ–ಸಮೂಹದಿಂದ, ಚತುರತರ–ಅತಿಶ್ರೇಷ್ಠಗಳಾದ, ಆಚಾರತಃ – ಸತ್ಸಂಪ್ರದಾಯಾಚರಣಗಳ ದೆಸೆಯಿಂದ, ಚಾರುಚಿತ್ತಾನ್ – ನಿರ್ದೋಷ ಮನಸ್ಸುಳ್ಳ, ಚೋದ್ಯಚುಂಚೂನ್–ಪ್ರಶ್ನೆಗಳಲ್ಲಿ ಜಾಣರಾದ, ಶ್ರಾವಕಾನ್–ಶಿಷ್ಯ (ಶ್ರೋತೃ) ಜನರನ್ನು ಕುರಿತು, ಚಿರಂ–ಚೆನ್ನಾಗಿ, ರೋಚಯಂತೀಂ–ಆನಂದಪಡಿಸತಕ್ಕ, ಶ್ರುತಿಚಿತವಚನಾಂ=ಶ್ರುತಿ–ವೇದಗಳಲ್ಲಿ, ಚಿತ–ಸಂಗ್ರಹಿಸಲ್ಪಟ್ಟ, ವಚನಾಂ–ವಾಕ್ಯಗಳುಳ್ಳ, ಅತ್ಯುಚ್ಚಾಂ–ಅತ್ಯಂತ ಉತ್ಕೃಷ್ಟವಾದ, ಉತ್ಖಾತದುಃಖಾಂ = ಉತ್ಖಾತ–ಕಿತ್ತೆಸೆಯಲ್ಪಟ್ಟ, ದುಃಖಾಂ–ದುಃಖವುಳ್ಳ, ಚಿತ್ರಾಂ–ಆಶ್ಚರ್ಯಕರವಾದ, ವ್ಯಾಖ್ಯಾಂ–ತತ್ತ್ವೋಪದೇಶವನ್ನು, ತೇ–ನಿಮ್ಮ, ಚಿಂತಾರತಾನ್–ಧ್ಯಾನದಲ್ಲಿ ಆಸಕ್ತರಾದ, ಚರಣಪರಿಚರಾನ್–ಪಾದಸೇವಕರಾದ, ಅಸ್ಮಾಂಶ್ಚ–ನಮ್ಮನ್ನೂ ಕೂಡ, ಕಿಂಚಿತ್–ಸ್ವಲ್ಪವಾಗಿ, ಶ್ರಾವಯ–ಕೇಳಿಸಿರಿ.

ದೋಷವಿಲ್ಲದ ದ್ವೈತಶಾಸ್ತ್ರವನ್ನು ರಚಿಸಿದ ಶ್ರೀಮದಾನಂದತೀರ್ಥರೇ ! ಪೂರ್ವಜನ್ಮದ ಪುಣ್ಯಗಳಿಂದ ಸತ್ಕರ್ಮಾಚರಣೆಗಳನ್ನು ಮಾಡಿ, ಸದ್ಬುದ್ಧಿಯುಳ್ಳವರೂ ಯೋಗ್ಯಪ್ರಶ್ನೆ ಮಾಡುವವರೂ ಆದ ಶಿಷ್ಯರಿಗೆ ಪ್ರೀತಿಕರವಾದ, ವೇದಪ್ರಮಾಣಯುಕ್ತವೂ ದುಃಖನಾಶಕರವೂ ಶ್ರುತಿಸ್ಮೃತಿಪುರಾಣಾದಿಗಳ ಉಪನ್ಯಾಸಗಳಿಂದ ಆಶ್ಚರ್ಯಕರವೂ ಆದ ಆ ವ್ಯಾಖ್ಯಾನವನ್ನು ತಮ್ಮನ್ನೇ ಧ್ಯಾನಿಸುತ್ತ ತಮ್ಮ ಪಾದಸೇವೆಯನ್ನೇ ಮಾಡುವ ನನಗೂ ಯೋಗ್ಯತಾನುಸಾರ ಕೇಳುವಂತೆ ಮಾಡಿರಿ. (ಈ ಶ್ಲೋಕಪುರಶ್ಚರಣದಿಂದ ಅಗಲಿದ ಪತ್ನೀಪುತ್ರಾದಿಗಳ ಸಂಬಂಧ ಮತ್ತು ವ್ಯಾಖ್ಯಾನಚಾತುರ್ಯಸಿದ್ಧಿ.) ॥ ೩೪ ॥

**ಪೀಠೇ ರತ್ನೋಪಕ್ಲೃಪ್ತೇ ರುಚಿರರುಚಿಮಣಿಜ್ಯೋತಿಷಾ ಸನ್ನಿಷಣ್ಣಂ ಬ್ರಹ್ಮಾಣಂ ಭಾವಿನಂ ತ್ವಾಂ ಜ್ವಲತಿ ನಿಜಪದೇ ವೈದಿಕಾದ್ಯಾ ಹಿ ವಿದ್ಯಾಃ । ಸೇವಂತೇ ಮೂರ್ತಿಮತ್ಯಃ ಸುಚರಿತ ಚರಿತಂ ಭಾತಿ ಗಂಧರ್ವಗೀತಂ ಪ್ರತ್ಯೇಕಂ ದೇವಸಂಸತ್ಸ್ವಪಿ ತವ ಭಗವನ್ನರ್ತಿತದ್ಯೋವಧೂಷು ॥ ೩೫ ॥**

ಸುಚರಿತ–ಸುಚರಿತ್ರವುಳ್ಳ ಶ್ರೀಮುಖ್ಯಪ್ರಾಣನೇ! ನಿಜಪದೇ=ನಿಜ–ನಿನ್ನದಾದ, ಪದೇ–ಸತ್ಯಲೋಕವೆಂಬ ಸ್ಥಾನದಲ್ಲಿ, ರುಚಿರರುಚಿಮಣಿಜ್ಯೋತಿಷಾ= ರುಚಿರ–ಮನೋಹರಗಳಾದ, ರುಚಿ–ಕಾಂತಿಗಳುಳ್ಳ, ಮಣಿ–ರತ್ನಗಳ, ಜ್ಯೋತಿಷಾ–ಕಾಂತಿಯಿಂದ, ಜ್ವಲತಿ–ಪ್ರಕಾಶಿಸುವ, ರತ್ನೋಪಕ್ಲೃಪ್ತೇ=ರತ್ನ–ರತ್ನ

ಗಳಿಂದ, ಉಪಕ್ಲ್ಪ್ತೇ–ರಚಿಸಲ್ಪಟ್ಟ, ಪೀಠೇ–ಸಿಂಹಾಸನದಲ್ಲಿ, ಸನ್ನಿಷಣ್ಣಂ–ಕುಳಿತಿರುವ, ಭಾವಿನಂ–ಮುಂದಾಗುವ, ಬ್ರಹ್ಮಾಣಂ–ಚತುರ್ಮುಖ ಬ್ರಹ್ಮನಾದ, ತ್ವಾಂ–ನಿನ್ನನ್ನು, ವೈದಿಕಾದ್ಯಾಃ=ವೈದಿಕ–ವೇದಸಂಬಂಧಿಗಳಾದ ವಿದ್ಯೆಗಳೇ, ಆದ್ಯಾಃ–ಮೊದಲಾಗಿರುವ, ವಿದ್ಯಾಃ–ತತ್ತ್ವವಿದ್ಯೆಗಳು, ಮೂರ್ತಿಮಂತ್ಯಃ (ಸತ್ಯಃ)–ದೇಹವನ್ನು ಧರಿಸಿದವುಗಳಾಗಿ, ಸೇವಂತೇ–ಸೇವಿಸುತ್ತವೆ, ಅಪಿ ಚ–ಮತ್ತು, ಭಗವನ್–ಷಡ್ಗುಣಪೂರ್ಣನಾದ ಶ್ರೀಮುಖ್ಯಪ್ರಾಣನೇ! ನರ್ತಿತದ್ಯೋವಧೂಷು=ನರ್ತಿತ–ಕುಣಿಯಲ್ಪಟ್ಟ, ದ್ಯೋವಧೂಷು–ಅಪ್ಸರಸ್ತ್ರೀಯರುಳ್ಳ, ದೇವಸಂಸತ್ಸು–ದೇವತೆಗಳ ಸಭೆಗಳಲ್ಲಿ, ಪ್ರತ್ಯೇಕಂ–ಬೇರೆ ಬೇರೆಯಾಗಿ, ಗಂಧರ್ವಗೀತಂ=ಗಂಧರ್ವ–ಗಂಧರ್ವರಿಂದ, ಗೀತಂ–ಹಾಡಲ್ಪಟ್ಟ, ತವ–ನಿನ್ನ, ಚರಿತಂ–ಮಾಹಾತ್ಮ್ಯವು, ಭಾತಿ–ಶೋಭಿಸುತ್ತದೆ.

ಸಚ್ಚರಿತ್ರನಾದ ಶ್ರೀಮುಖ್ಯಪ್ರಾಣನೇ! ಭಾವಿಬ್ರಹ್ಮನಾದ ನೀನು ರತ್ನಗಳ ಕಾಂತಿಯಿಂದ ಹೊಳೆವ ಸಿಂಹಾಸನದಲ್ಲಿ ಕುಳಿತಿರುವಾಗ, ವೈದಿಕವಿದ್ಯೆಗಳಾದಿಯಾಗಿ ಸರ್ವವಿದ್ಯೆಗಳೂ ಮೂರ್ತಿಮತ್ತಾಗಿ ನಿನ್ನನ್ನು ಸೇವಿಸುವುವು. ದೇವಸಭೆಗಳಲ್ಲಿ ಸರ್ವತ್ರದಲ್ಲಿಯೂ ಅಪ್ಸರಸ್ತ್ರೀಯರು ಕುಣಿಯುವಾಗ ಗಂಧರ್ವರು ನಿನ್ನ ಚರಿತ್ರವನ್ನು ಹಾಡುವರು. (ಇದರಿಂದ ಸತ್ಯಲೋಕದಲ್ಲಿ ಬ್ರಹ್ಮದೇವನು ಮಹಾರಾಜನಂತೆ ಮೆರೆಯುವಾಗ ಸೂತ್ರನಾಮಕರಾದ ವಾಯುದೇವರು ಯುವರಾಜರಂತೆ ಆಸ್ಥಾನಮಂಟಪದಲ್ಲಿ ಮೆರೆಯುತ್ತ ಬ್ರಹ್ಮದೇವನ ಜಗತ್ತಿನ ಕಾರ್ಯಕ್ಕೆ ನೆರವಾಗುವರೆಂದು ಸೂಚಿತವಾಗಿದೆ.) (ಈ ಶ್ಲೋಕಪುರಶ್ಚರಣದಿಂದ ಮಹದೈಶ್ವರ್ಯ ಲಾಭ; ಸರ್ವಾಧಿಕ್ಯಸಿದ್ಧಿ.) ॥ ೩೫ ॥

**ಸಾನುಕ್ರೋಶೈರಜಸ್ರಂ ಜನಿಮೃತಿನಿರಯಾದ್ಯೂರ್ಮಿಮಾಲಾ-ಽಽವಿಲೇಽಸ್ಮಿನ್ ಸಂಸಾರಾಬ್ಧೌ ನಿಮಗ್ನಾಂಶ್ಶರಣಮಶರಣಾನಿಚ್ಛತೋ ವೀಕ್ಷ್ಯ ಜಂತೂನ್ । ಯುಷ್ಮಾಭಿಃ ಪ್ರಾರ್ಥಿತಃ ಸಞ್ಜಲನಿಧಿಶಯನಃ ಸತ್ಯವತ್ಯಾಂ ಮಹರ್ಷೇರ್ವ್ಯಕ್ತಿಶ್ಚಿನ್ಮಾತ್ರಮೂರ್ತಿರ್ನ ಖಲು ಭಗವತಃ ಪ್ರಾಕೃತೋ ಜಾತು ದೇಹಃ ॥ ೩೬ ॥**

ಜನಿಮೃತಿ.......ವಿಲೇ=ಜನಿ–ಜನನ, ಮೃತಿ–ಮರಣ, ನಿರಯ–ನರಕ ಇವುಗಳೇ, ಆದಿ–ಮೊದಲಾಗಿ ಉಳ್ಳವುಗಳೆಂಬ, ಊರ್ಮಿ–ಅಲೆಗಳ, ಮಾಲಾ–ಸಾಲುಗಳಿಂದ, ಆವಿಲೇ–ಕಲುಷಿತವಾದ, ಅಸ್ಮಿನ್–ಈ, ಸಂಸಾರಾಬ್ಧೌ–ಸಂಸಾರವೆಂಬ ಸಮುದ್ರದಲ್ಲಿ, ಅಜಸ್ರಂ–ನಿರಂತರದಲ್ಲಿ, ನಿಮಗ್ನಾನ್–ಮುಳುಗಿದ, ಅಶರ-

ಣಾನ್–ರಕ್ಷಕರಿಲ್ಲದ, ಶರಣಂ–ರಕ್ಷಕನನ್ನು, ಇಚ್ಛತಃ–ಅಪೇಕ್ಷಿಸುವ, ಜಂತೂನ್–ಮನುಷ್ಯ ಮೊದಲಾದ ಸಾಧುಪ್ರಾಣಿಗಳನ್ನು ವೀಕ್ಷ್ಯ–ನೋಡಿ, ಸಾನುಕ್ರೋಶೈಃ–ದಯೆಯಿಂದ ಕೂಡಿರುವ, ಯುಷ್ಮಾಭಿಃ–ನಿಮ್ಮಿಂದ, ಪ್ರಾರ್ಥಿತಃ-ಅವತರಿಸಲು ಪ್ರಾರ್ಥಿಸಲ್ಪಟ್ಟ, ಜಲನಿಧಿಶಯನಃ=ಜಲನಿಧಿ–ಸಮುದ್ರದಲ್ಲಿ, ಶಯನಃ–ಮಲಗತಕ್ಕ ಶ್ರೀವಿಷ್ಣುವು, ಸತ್ಯವತ್ಯಾಂ–ಸತ್ಯವತೀ ದೇವಿಯಲ್ಲಿ, ಮಹರ್ಷೇಃ–ಋಷಿಶ್ರೇಷ್ಠನಾದ ಪರಾಶರನ ದೆಸೆಯಿಂದ, ಚಿನ್ಮಾತ್ರಮೂರ್ತಿಃ=ಚಿನ್ಮಾತ್ರ–ಕೇವಲ ಜ್ಞಾನವೇ, ಮೂರ್ತಿಃ(ಸನ್)–ದೇಹವುಳ್ಳವನಾಗಿ, ವ್ಯಕ್ತಃ–ಅವತರಿಸಿದನು, ಭಗವತಃ–ಷಡ್ಗುಣೈಶ್ವರ್ಯಪರಿಪೂರ್ಣನಾದ ವಿಷ್ಣುವಿನ, ದೇಹಃ–ಶರೀರವು, ಜಾತು–ಎಂದಿಗಾದರೂ, ಪ್ರಾಕೃತಃ–ಪ್ರಕೃತಿವಿಕಾರ (ಜಡ ಸ್ವರೂಪ)ವಾದುದು, ನ ಖಲು–ಅಲ್ಲ.

ಸಜ್ಜನರು ಹುಟ್ಟು ಸಾವು ನರಕ ಮುಂತಾದ ಕಷ್ಟಗಳೆಂಬ ಅಲೆಗಳಿಂದ ತುಂಬಿದ ಸಂಸಾರಸಮುದ್ರದಲ್ಲಿ ಮುಳುಗಿ ಕಷ್ಟಪಡುತ್ತಿರುವುದನ್ನು ಕಂಡು, ಕರುಣಾಳುಗಳಾದ ಶ್ರೀಮುಖ್ಯಪ್ರಾಣದೇವನು ಅನಾಥರಾದ ಆ ಸಜ್ಜನರನ್ನುದ್ಧರಿಸಲು ಪ್ರಾರ್ಥಿಸಿದುದರಿಂದ ಶ್ರೀಹರಿಯು ಪರಾಶರರಿಂದ ಸತ್ಯವತೀದೇವಿಯಲ್ಲಿ ಶ್ರೀವೇದವ್ಯಾಸಾವತಾರವನ್ನು ಮಾಡಿದನು. ಆತನ ಅವತಾರದೇಹವು ನಮ್ಮ ದೇಹದಂತೆ ಪ್ರಕೃತಿಸಂಬಂಧವಾದ ಜಡರೂಪವಾದುದಲ್ಲ. (ಪರಂತು ಜ್ಞಾನಾನಂದಾತ್ಮಕವೆಂದು ಭಾವ.) (ಈ ಶ್ಲೋಕಪುರಶ್ಚರಣದಿಂದ ವೈರಾಗ್ಯ-ಸತ್ಪುತ್ರಲಾಭ.) ॥ ೩೬ ॥

**ಅಸ್ತವ್ಯಸ್ತಂ ಸಮಸ್ತಶ್ರುತಿಗತಮಧಮೈ ರತ್ನಪೂಗಂ ಯಥಾಂಧೈರರ್ಥಂ ಲೋಕೋಪಕೃತ್ಯೈ ಗುಣಗಣನಿಲಯಃ ಸೂತ್ರಯಮಾಸ ಕೃತ್ಸ್ನಮ್ । ಯೋಽಸೌ ವ್ಯಾಸಾಭಿಧಾನಸ್ತಮಹಮಹರಹರ್ಭಕ್ತಿತಸ್ತತ್ಪ್ರಸಾದಾತ್ ಸದ್ಯೋ ವಿದ್ಯೋಪಲಬ್ಧ್ಯೈ ಗುರುತಮಮಗುರುಂ ದೇವದೇವಂ ನಮಾಮಿ ॥ ೩೭ ॥**

ಗುಣಗಣನಿಲಯಃ = ಗುಣಗಣ – ಜ್ಞಾನಾನಂದಾದಿ ಗುಣಸಮೂಹಗಳಿಗೆ, ನಿಲಯಃ–ಆಶ್ರಯನಾದ, ವ್ಯಾಸಾಭಿಧಾನಃ–ಶ್ರೀವೇದವ್ಯಾಸರೆಂಬ ಹೆಸರುಳ್ಳವನು, ಅಧಮೈಃ–ನೀಚರಾದ, ಅಜ್ಞಾನಿಗಳಿಂದ, ಅಂಧೈಃ–ಕುರುಡರಿಂದ, ಅಸ್ತವ್ಯಸ್ತಂ–ವ್ಯತ್ಯಸ್ತವಾಗಿ ಪೋಣಿಸಲ್ಪಟ್ಟ, ಸಮಸ್ತಶ್ರುತಿಗತಂ–ಎಲ್ಲರ ಕಿವಿಗಳಲ್ಲಿರುವ, ರತ್ನಪೂಗಮಿವ–ರತ್ನ ಸಮೂಹವನ್ನೆಂಬಂತೆ, ಸಮಸ್ತಶ್ರುತಿಗತಂ–ಸರ್ವವೇದಗಳಲ್ಲಿರುವ, ಅಸ್ತವ್ಯಸ್ತಂ–ವ್ಯತ್ಯಸ್ತವಾಗಿ ಹೇಳಲ್ಪಟ್ಟ, ಕೃತ್ಸ್ನಂ–ಸಮಸ್ತ

ಅರ್ಥಂ–ಅರ್ಥವನ್ನು, ಲೋಕೋಪಕೃತ್ಯೈ–ಸಜ್ಜನರ ಉಪಕಾರಕ್ಕೋಸ್ಕರ, ಸೂತ್ರಯಾಮಾಸ–ಬ್ರಹ್ಮಸೂತ್ರರೂಪವಾಗಿ ರಚಿಸಿದನು. (ರತ್ನಪಕ್ಷದಲ್ಲಿ: ದಾರದಲ್ಲಿ ಪೋಣಿಸಿದನು.) ಅಹಂ–ನಾನು, ತತ್ಪ್ರಸಾದಾತ್–ಅವನ ಅನುಗ್ರಹದ ದೆಸೆಯಿಂದ, ಸದ್ಯಃ–ಕೂಡಲೇ, ವಿದ್ಯೋಪಲಬ್ಧ್ಯೈ–ತತ್ತ್ವಜ್ಞಾನಲಾಭಕ್ಕೋಸ್ಕರ, ಅಹರಹಃ–ಪ್ರತಿದಿನವೂ, ಅಗುರುಂ–ಸರ್ವೋತ್ತಮನಾದುದರಿಂದ ಬೇರೆ ಗುರುವಿಲ್ಲದಿರುವ, ಗುರುತಮಂ–ಮುಖ್ಯಗುರುವಾದ, ದೇವದೇವಂ–ಬ್ರಹ್ಮಾದಿ ದೇವತೆಗಳಿಗೂ ದೇವರಾದ, ತಂ–ಆ ವೇದವ್ಯಾಸದೇವರನ್ನು, ಭಕ್ತಿತಃ–ಭಕ್ತಿಯಿಂದ, ನಮಾಮಿ–ನಮಸ್ಕರಿಸುತ್ತೇನೆ.

ಕುರುಡರು ಅಸ್ತವ್ಯಸ್ತವಾಗಿ ಪೋಣಿಸಿದ ರತ್ನಗಳನ್ನು ಜಾಣನಾದವನು ಸರಿಯಾಗಿ ಪೋಣಿಸಿದಂತೆ, ನೀಚರಾದವರು ಅಸ್ತವ್ಯಸ್ತವಾಗಿ ಹೇಳಿದ ವೇದಗಳ ಅರ್ಥಗಳನ್ನು ಲೋಕೋಪಕಾರಕ್ಕಾಗಿ ಶ್ರೀವೇದವ್ಯಾಸರು ಬ್ರಹ್ಮಸೂತ್ರಗಳಿಂದ ಸರಿಯಾಗಿ ಸಮರ್ಥಿಸಿ ಹೇಳಿದರು. ಶ್ರೀಮುಖ್ಯಪ್ರಾಣನೇ, ನಿನ್ನ ಅನುಗ್ರಹದಿಂದ ಸದ್ಯದಲ್ಲಿ ವಿದ್ಯಾಪ್ರಾಪ್ತಿಗಾಗಿ ಆ ಗುರೂತ್ತಮನಾದ ವೇದವ್ಯಾಸನನ್ನು ವಂದಿಸುತ್ತೇನೆ. (ಶ್ರೀವೇದವ್ಯಾಸರ ಅನುಗ್ರಹ ಪಡೆಯಬೇಕಾದರೆ ನಮ್ಮ ಗುರುಗಳಾದ ಶ್ರೀವಾಯುದೇವರ ಅನುಗ್ರಹವು ಮೊದಲು ಬೇಕೆಂದು 'ತತ್ಪ್ರಸಾದಾತ್' ಎಂಬುದರಿಂದ ತಿಳಿಸಿದ್ದಾರೆ. (ಈ ಶ್ಲೋಕಪುರಶ್ಚರಣದಿಂದ ವಸ್ತುಸಿದ್ಧಿ.) ॥ ೩೭ ॥

**ಆಜ್ಞಾಮನ್ಯೈರಧಾರ್ಯಾಂ ಶಿರಸಿ ಪರಿಸರದ್ರಶ್ಮಿಕೋಟೀರ-ಕೋಟೌ ಕೃಷ್ಣಸ್ಯಾಕ್ಲಿಷ್ಟಕರ್ಮಾ ದಧದನುಸರಣಾದರ್ಥಿತೋ ದೇವಸಂಘೈಃ । ಭೂಮನ್ನಾಗತ್ಯ ಭೂಮನ್ನಸುಕರಮಕರೋ-ರ್ಬ್ರಹ್ಮಸೂತ್ರಸ್ಯ ಭಾಷ್ಯಂ ದುರ್ಭಾಷ್ಯಂ ವ್ಯಸ್ಯ ದಸ್ಯೋರ್ಮಣಿಮತ ಉದಿತಂ ವೇದಸದ್ಯುಕ್ತಿಭಿಸ್ತ್ವಮ್ ॥ ೩೮ ॥**

ಭೂಮನ್–ಮಹಾಮಹಿಮನಾದ ಶ್ರೀಮುಖ್ಯಪ್ರಾಣನೇ! ಕೃಷ್ಣಸ್ಯ–ಶ್ರೀಮನ್ನಾರಾಯಣನ, ಅನ್ಯೈಃ–ನಿನ್ನಿಂದ ಇತರರಾದ ದೇವತೆಗಳಿಂದ, ಅಧಾರ್ಯಾಂ–ಹೊರಲಿಕ್ಕೆ ಅಸಾಧ್ಯವಾದ (ಆಚರಿಸಲಶಕ್ಯವಾದ), ಆಜ್ಞಾಂ–ಅಪ್ಪಣೆಯನ್ನು, ಪರಿಸರದ್ರಶ್ಮಿಕೋಟೀರಕೋಟೌ=ಪರಿಸರತ್ – ಹರಡುತ್ತಿರುವ. ರಶ್ಮಿ–ಕಿರಣಗಳುಳ್ಳ, ಕೋಟೀರ–ಕಿರೀಟಗಳ, ಕೋಟೌ–ತುದಿಯುಳ್ಳ, ಶಿರಸಿ–ತಲೆಯಲ್ಲಿ, ದಧತ್–ಧರಿಸಿದ, ಅಕ್ಲಿಷ್ಟಕರ್ಮಾ=ಅಕ್ಲಿಷ್ಟ–ದೋಷವಿಲ್ಲದ, ಕರ್ಮಾ–ಕಾರ್ಯ

ವುಳ್ಳ, ತ್ವಂ–ನೀನು, ದೇವಸಂಘೈಃ–ದೇವತೆಗಳ ಸಮೂಹಗಳಿಂದ, ಅನುಸರಣಾತ್–ಅನುಸರಣವನ್ನು ಮಾಡಿ, ಅರ್ಥಿತಃ (ಸನ್)–ಪ್ರಾರ್ಥಿಸಲ್ಪಟ್ಟವನಾಗಿ, ಭೂಮೌ–ಭೂಮಿಯಲ್ಲಿ, ಆಗತ್ಯ–ಬಂದು, ದಸ್ಯೋಃ–(ಜಗತ್ತು ಸುಳ್ಳೆಂದು ಹೇಳಿ ಇಲ್ಲದಂತೆ ಮಾಡುವುದರಿಂದ) ಕಳ್ಳನಾದ, ಮಣಿಮತಃ–ಮಣಿಮಂತನ ದೆಸೆಯಿಂದ, ಉದಿತಂ–ಹೇಳಲ್ಪಟ್ಟ, ದುರ್ಭಾಷ್ಯಂ=ದುಷ್ಟ ಭಾಷ್ಯವನ್ನು, ವೇದಸದ್ಯುಕ್ತಿಭಿಃ–ವೇದಗಳು, ನಿರ್ದುಷ್ಟ ಯುಕ್ತಿಗಳು, ಇವುಗಳಿಂದ, ವ್ಯಸ್ಯ–ನಿರಾಕರಿಸಿ, ಅಸುಕರಂ–ಸರ್ವಜ್ಞರಲ್ಲದವರಿಂದ ಮಾಡಲಿಕ್ಕೆ ಅಸಾಧ್ಯವಾದ, ಬ್ರಹ್ಮಸೂತ್ರಸ್ಯ–ಬ್ರಹ್ಮಸೂತ್ರಗಳಿಗೆ, ಭಾಷ್ಯಂ–ಭಾಷ್ಯವನ್ನು, ಅಕರೋಃ–ಮಾಡಿದೆ.

ಶ್ರೀಮುಖ್ಯಪ್ರಾಣನೇ! ನೀನು ಶ್ರೀಪರಮಾತ್ಮನ ಅಪ್ಪಣೆಯನ್ನು ಕಿರೀಟವುಳ್ಳ ಶಿರಸ್ಸಿನಿಂದ ಧರಿಸಿ, ದೇವತೆಗಳ ಪ್ರಾರ್ಥನೆಯಿಂದ ಭೂಮಿಯಲ್ಲಿ ಶ್ರೀಮಧ್ವರೂಪದಿಂದ ಅವತರಿಸಿ, ಬದರಿಕಾಶ್ರಮದಲ್ಲಿ ಶ್ರೀವೇದವ್ಯಾಸರ ಅಪ್ಪಣೆಯನ್ನು ಪಡೆದು, ಅದ್ವೈತಭಾಷ್ಯವನ್ನು ನಿರಾಕರಿಸಿ, ವೇದ ಮಂತ್ರ ಯುಕ್ತಿಗಳಿಂದ ಬಲಿಷ್ಠವಾದ ದ್ವೈತಭಾಷ್ಯವನ್ನು ಮಾಡಿದೆ ॥ ೩೮ ॥

(ಅವತಾರವಾದ ಮೇಲೆ ಶ್ರೀವೇದವ್ಯಾಸದೇವರ ಅಪ್ಪಣೆಯಾದುದು. ಆಗ ಸನ್ಯಾಸಿಗಳಾದ ಶ್ರೀಮಧ್ವಾಚಾರ್ಯರಿಗೆ ಕಿರೀಟವಿದ್ದಿಲ್ಲವಾದುದರಿಂದ ಕೃಷ್ಣನ ಆಜ್ಞೆಯೆಂದರೆ ಅವತಾರದ ಮೊದಲಿನ ಶ್ರೀಹರಿಯಾಜ್ಞೆಯೆಂದು ತಿಳಿಯಬೇಕು.)

(ಈ ಶ್ಲೋಕಪುರಶ್ಚರಣದಿಂದ ರಾಜಪ್ರತಿಬಂಧನಿವೃತ್ತಿ, ನಿಕ್ಷೇಪಸಂದರ್ಶನ.)

ಶ್ರೀಮಧ್ವಾಚಾರ್ಯರ ಅವತಾರದ ಸ್ಥಳವನ್ನೂ, ವಂಶವನ್ನೂ, ಆಶ್ರಮವನ್ನೂ ವಿವರಿಸುತ್ತಾರೆ:

**ಭೂತ್ವಾ ಕ್ಷೇತ್ರೇ ವಿಶುದ್ಧೇ ದ್ವಿಜಗಣನಿಲಯೇ ರೂಪ್ಯಪೀಠಾಭಿಧಾನೇ ತತ್ರಾಪಿ ಬ್ರಹ್ಮಜಾತಿಸ್ತ್ರಿಭುವನವಿಶದೇ ಮಧ್ಯಗೇಹಾಖ್ಯಗೇಹೇ । ಪಾರಿವ್ರಾಜ್ಯಾಧಿರಾಜಃ ಪುನರಪಿ ಬದರೀಂ ಪ್ರಾಪ್ಯ ಕೃಷ್ಣಂ ಚ ನತ್ವಾ ಕೃತ್ವಾ ಭಾಷ್ಯಾಣಿ ಸಮ್ಯಗ್ ವ್ಯತನುತ ಚ ಭವಾನ್ ಭಾರತಾರ್ಥಪ್ರಕಾಶಮ್ ॥ ೩೯ ॥**

[ಮುಖ್ಯಪ್ರಾಣ–ಶ್ರೀವಾಯುದೇವನೇ!] ಭವಾನ್–ನೀನು, ವಿಶುದ್ಧೇ–ಪವಿತ್ರವಾದ, ದ್ವಿಜಗಣನಿಲಯೇ=ದ್ವಿಜಗಣ–ಬ್ರಾಹ್ಮಣಸಮೂಹಕ್ಕೆ, ನಿಲಯೇ–ಆಶ್ರಯವಾದ, ರೂಪ್ಯಪೀಠಾಭಿಧಾನೇ–ರೂಪ್ಯಪೀಠವೆಂಬ ಹೆಸರುಳ್ಳ, ತ್ರಿಭುವನವಿಶದೇ=ತ್ರಿಭುವನ–ಮೂರು ಲೋಕಗಳಲ್ಲಿ, ವಿಶದೇ–ಪ್ರಸಿದ್ಧವಾದ

ಕ್ಷೇತ್ರೇ–ಕ್ಷೇತ್ರದಲ್ಲಿ, ತತ್ರಾಪಿ–ಆ ಸ್ಥಳದಲ್ಲಿಯೂ ಕೂಡ, ಮಧ್ಯಗೇಹಾಖ್ಯ-ಗೇಹೇ=ಮಧ್ಯಗೇಹ–ನಡುಮನೆಯೆಂಬ, ಆಖ್ಯ–ಹೆಸರುಳ್ಳ, ಗೇಹೇ–ಮನೆಯಲ್ಲಿ, ಬ್ರಹ್ಮಜಾತಿಃ–ಬ್ರಾಹ್ಮಣನ ಜಾತಿಯುಳ್ಳವನು, ಭೂತ್ವಾ–ಆಗಿ, ಪಾರಿ-ವ್ರಾಜ್ಯಾಧಿರಾಜಃ=ಪಾರಿವ್ರಾಜ್ಯ–ಸಂನ್ಯಾಸಕ್ಕೆ, ಅಧಿರಾಜಃ–ಅಧಿಪತಿಯಾಗಿ, ಪುನರಪಿ ಬದರೀಂ–ಮತ್ತೊಮ್ಮೆ ಬದರಿಕಾಶ್ರಮವನ್ನು, ಪ್ರಾಪ್ಯ–ಹೊಂದಿ, ಕೃಷ್ಣಂ ಚ–ವೇದವ್ಯಾಸ ದೇವರನ್ನು ಕೂಡ, ನತ್ವಾ–ನಮಸ್ಕರಿಸಿ, ಭಾಷ್ಯಾಣಿ–ಉಪನಿಷದ್ಭಾಷ್ಯಗಳನ್ನು, ಕೃತ್ವಾ–ಮಾಡಿ, ಭಾರತಾರ್ಥಪ್ರಕಾಶಂ=ಭಾರತ–ಮಹಾಭಾರತದ, ಅರ್ಥ–ಅರ್ಥಗಳ, ಪ್ರಕಾಶಂ–ಪ್ರಕಟವುಳ್ಳ ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯವೆಂಬ ಗ್ರಂಥವನ್ನು, ವ್ಯತನುತ–ಮಾಡಿದೆ.

ಶ್ರೀಮುಖ್ಯಪ್ರಾಣವೇ! ನೀನು ಬ್ರಾಹ್ಮಣರಿಗೆಲ್ಲ ಆಶ್ರಯವೂ ತ್ರಿಲೋಕ ಪ್ರಸಿದ್ಧವೂ ಪವಿತ್ರವೂ ಆದ ಶ್ರೀರೂಪ್ಯಪೀಠಕ್ಷೇತ್ರದಲ್ಲಿ ನಡುಮನೆಯೆಂಬ ಕುಲದ ಬ್ರಾಹ್ಮಣನ ಪತ್ನಿಯಲ್ಲಿ ವಾಸುದೇವನಾಗಿ ಅವತರಿಸಿ, ಸನ್ನ್ಯಾಸಾಶ್ರಮ ಸ್ವೀಕರಿಸಿ, ಪುನಃ ಬದರಿಗೆ ಹೋಗಿ ಶ್ರೀವೇದವ್ಯಾಸರನ್ನು ವಂದಿಸಿ, ಉಪನಿಷದ್ಭಾಷ್ಯಗಳನ್ನೂ, ಭಾರತತಾತ್ಪರ್ಯನಿರ್ಣಯವನ್ನೂ (ಅವರ ಅಪ್ಪಣೆಯಿಂದ) ಮಾಡಿದೆ ॥ ೩೯ ॥

(ವೇಂಕಟೇಶಮಾಹಾತ್ಮ್ಯೇ—"ಸಪ್ತಸಂವತ್ಸರಾದೂರ್ಧ್ವಂ ಗತ್ವಾ ಬದರಿಕಾಶ್ರಮಮ್ । ಪ್ರಪೇದೇ ಸರ್ವಶಾಸ್ತ್ರಾಣಿ ವೇದಾಂಶ್ಚೈವಾವ್ಯಯಾನಪಿ ॥ ಇತ್ಥಂ ಹಿ ಸರ್ವವಿದ್ಯಾಶ್ಚ ವ್ಯಾಸ-ದೇವಾನ್ಮಹಾತ್ಮನಃ । ಅವಾಪ್ತಸರ್ವಶಾಸ್ತ್ರೋಽಸೌ ವಟುಸ್ತದಿದಮಬ್ರವೀತ್ ॥" ಇತಿ ॥)

(ಏಳು ವರ್ಷದ ಮೇಲೆ ಬದರಿಗೆ ಹೋಗಿ ಶ್ರೀವ್ಯಾಸರಿಂದಲೇ ಸರ್ವಶಾಸ್ತ್ರಗಳನ್ನೂ, ನಿತ್ಯಗಳಾದ ವೇದಗಳನ್ನೂ, ಇತರ ಎಲ್ಲ ವಿದ್ಯೆಗಳನ್ನೂ ತಿಳಿದು, ಸರ್ವಶಾಸ್ತ್ರಪಾರಂಗತರಾದ ಶ್ರೀಮಧ್ವಾಚಾರ್ಯರು ಈ ದ್ವೈತಶಾಸ್ತ್ರವನ್ನು ಹೇಳಿದರೆಂಬ ಪ್ರಮಾಣದಿಂದ, ಅವತರಿಸಿ ಏಳು ವರ್ಷದವರೆಂದು ಕೆಲವರ ಅರ್ಥ. ಆಶ್ರಮ ಪಡೆದ ಮೇಲೆ ಏಳು ವರ್ಷದವರು ಬದರಿಗೆ ಹೋದುದೆಂದು ಬೇರೆ ಕೆಲವರು ಅರ್ಥ ಮಾಡುವರು.) (ಈ ಶ್ಲೋಕಪುರಶ್ಚರಣದಿಂದ ಸಂತಾನ ಲಾಭ.)

ಹೀಗೆ ಸ್ತುತಿಸಿ ಭಕ್ತಿಯ ಉದ್ರೇಕದಿಂದ ಮರಳಿ ಗುರುಗಳನ್ನು ವಂದಿಸುತ್ತಾರೆ:

**ವಂದೇ ತಂ ತ್ವಾ ಸುಪೂರ್ಣಪ್ರಮತಿಮನುದಿನಾಸೇವಿತಂ ದೇವ-ವೃಂದೈರ್ವಂದೇ ವಂದಾರುಮೀಶೇ ಶ್ರಿಯ ಉತ ನಿಯತಂ ಶ್ರೀಮದಾನಂದತೀರ್ಥಮ್ । ವಂದೇ ಮಂದಾಕಿನೀಸತ್ಸರಿದಮಲ-**

**ಜಲಾಸೇಕಸಾಧಿಕ್ಯಸಂಗಂ ವಂದೇಽಹಂ ದೇವ ಭಕ್ತ್ಯಾ ಭವಭಯ ದಹನಂ ಸಜ್ಜನಾನ್ ಮೋದಯಂತಮ್ ॥ ೪೦ ॥**

**ದೇವ**–ಶ್ರೀವಾಯುದೇವನೇ ! ತಂ–ಹಾಗೆ ಲೋಕಪ್ರಸಿದ್ಧನಾದ, ತ್ವಾ–ನಿನ್ನನ್ನು, ಅಹಂ–ನಾನು, ವಂದೇ–ನಮಸ್ಕರಿಸುತ್ತೇನೆ, ಸ್ತುತಿಸುತ್ತೇನೆ. ದೇವವೃಂದ್ಯೈಃ=ದೇವ–ದೇವತೆಗಳ, ವೃಂದ್ಯೈಃ ಸಮೂಹಗಳಿಂದ. ಅನುದಿನಾಸೇವಿತಂ=ಅನುದಿನ–ಪ್ರತಿದಿನದಲ್ಲಿ, ಆಸೇವಿತಂ–ಚೆನ್ನಾಗಿ ಸೇವಿಸಲ್ಪಟ್ಟ, ಸುಪೂರ್ಣಪ್ರಮತಿಂ=ಸು–ಚೆನ್ನಾಗಿ ಪೂರ್ಣ–ತುಂಬಿದ, ಪ್ರಮತಿಂ–ಶ್ರೇಷ್ಠಜ್ಞಾನವುಳ್ಳ (ಪೂರ್ಣಪ್ರಜ್ಞರೆಂಬ ನಾಮವುಳ್ಳ), ತ್ವಾ–ನಿನ್ನನ್ನು, ವಂದೇ–ನಮಸ್ಕರಿಸುತ್ತೇನೆ. ಈಶೇ–ಸ್ವಾಮಿಯಾದ ಶ್ರೀವಿಷ್ಣುವಿನಲ್ಲಿ, ನಿಯತಂ–ಅವಶ್ಯವಾಗಿ, ವಂದಾರುಂ–ನಮಸ್ಕರಿಸುವ ಶೀಲವುಳ್ಳ, ಶ್ರಿಯಃ ಉತ–ಲಕ್ಷ್ಮೀದೇವಿಗೂ, ವಂದಾರುಂ–ವಂದಿಸುವ, ಶ್ರೀಮದಾನಂದತೀರ್ಥಂ–ಶ್ರೀಮದಾನಂದತೀರ್ಥರೆನಿಸಿದ, ತ್ವಾ–ನಿನ್ನನ್ನು, ವಂದೇ–ನಮಸ್ಕರಿಸುತ್ತೇನೆ. ಮಂದಾಕಿನೀ...ಸಂಗಂ=ಮಂದಾಕಿನೀ–ಸ್ವರ್ಗಂಗೆಯೆಂಬ, ಸತ್–ಪುಣ್ಯಕರವಾದ, ಸರಿತ್–ನದಿಯ, ಅಮಲ–ನಿರ್ಮಲವಾದ, ಜಲ–ನೀರಿನ, ಆಸೇಕ–ಅಭಿಷೇಕದ ದೆಸೆಯಿಂದ, ಸಾಧಿಕ್ಯ–ಅಧಿಕತ್ವದಿಂದ ಕೂಡಿದ, ಸಂಗಂ–ಸಂಸರ್ಗವುಳ್ಳ, ಭವಭಯದಹನಂ=ಭವ–ಸಂಸಾರದ ದೆಸೆಯಿಂದುಂಟಾದ, ಭಯ–ಅಂಜಿಕೆಯನ್ನು, ದಹನಂ–ಸುಡತಕ್ಕ, ಸಜ್ಜನಾನ್–ಸಾಧುಜನರನ್ನು, ಮೋದಯಂತಂ–ಸಂತೋಷಪಡಿಸತಕ್ಕ, ತ್ವಾ – ನಿನ್ನನ್ನು (ಪ್ರಸಿದ್ಧನಾದ ನಿನ್ನನ್ನು), ಭಕ್ತ್ಯಾ–ಭಕ್ತಿಯಿಂದ, ವಂದೇ–ವಂದಿಸುತ್ತೇನೆ.

ಪೂರ್ಣಪ್ರಜ್ಞರೆನಿಸಿದ ಶ್ರೀಮುಖ್ಯಪ್ರಾಣನೇ! ಪ್ರತಿದಿನ ದೇವತೆಗಳಿಂದ ಸೇವಿಸಲ್ಪಡುವ ನಿನಗೆ ವಂದಿಸುತ್ತೇನೆ; ಲಕ್ಷ್ಮೀನಾರಾಯಣನನ್ನು ನಿತ್ಯದಲ್ಲಿಯೂ ವಂದಿಸುತ್ತಿರುವ ಶ್ರೀಮದಾನಂದತೀರ್ಥರೆನಿಸಿದ ನಿನಗೆ ವಂದಿಸುತ್ತೇನೆ; ಸ್ವರ್ಗಂಗೆಯ ನಿರ್ಮಲ ಜಲಸ್ನಾನಕ್ಕಿಂತಲೂ ಮಿಗಿಲಾದ ಸಂಸರ್ಗವುಳ್ಳ ನಿನಗೆ ವಂದಿಸುತ್ತೇನೆ; ಸಂಸಾರಭಯವನ್ನು ಪರಿಹರಿಸಿ ಸಜ್ಜನರನ್ನು ಆನಂದಪಡಿಸುವ ನಿನಗೆ ಭಕ್ತಿಯಿಂದ ವಂದಿಸುವೆನು. (ಈ ಶ್ಲೋಕಪುರಶ್ಚರಣದಿಂದ ಗ್ರಹಪೀಡಾ ಪರಿಹಾರ, ರಾಜಬಂಧನಪರಿಹಾರ.) ॥ ೪೦ ॥

ಗ್ರಂಥಕರ್ತೃಗಳು ಈ ಸ್ತೋತ್ರಪಠನದ ಫಲವನ್ನು ವಿವರಿಸಿ ಈ ಸ್ತೋತ್ರವನ್ನು ಮುಗಿಸುತ್ತಾರೆ:

**ಸುಬ್ರಹ್ಮಣ್ಯಾಖ್ಯಸೂರೇಃ ಸುತ ಇತಿ ಸುಭೃಶಂ ಕೇಶವಾನಂದತೀರ್ಥಶ್ರೀಮಚ್ಛ್ರೀಪಾದಾಬ್ಜಭಕ್ತಃ ಸ್ತುತಿಮಕೃತ ಹರೇರ್ವಾಯು-**

**ದೇವಸ್ಯ ಚಾಸ್ಯ । ತತ್ಪಾದಾರ್ಚಾದರೇಣ ಗ್ರಥಿತಪದಲಸನ್ಮಾಲಯಾ ತ್ವೇತಯಾ ಯೇ ಸಂರಾಧ್ಯಾಮೂ ನಮಂತಿ ಪ್ರತತಮತಿಗುಣಾ ಮುಕ್ತಿಮೇತೇ ವ್ರಜಂತಿ ॥ ೪೧ ॥**

ಇತಿ ಕವಿಕುಲತಿಲಕಶ್ರೀಮತ್ತ್ರಿವಿಕ್ರಮಪಂಡಿತಾಚಾರ್ಯವಿರಚಿತಾ

ವಾಯುಸ್ತುತಿಃ ಸಮಾಪ್ತಾ

ಸುಬ್ರಹ್ಮಣ್ಯಾಖ್ಯಸೂರೇಃ=ಸುಬ್ರಹ್ಮಣ್ಯ-ಸುಬ್ರಹ್ಮಣ್ಯನೆಂದು, ಆಖ್ಯ-ಹೆಸರುಳ್ಳ, ಸೂರೇಃ-ಪಂಡಿತನ, ಸುತ ಇತಿ-ಮಗನಾದ, ಸುಭೃಶಂ-ಚೆನ್ನಾಗಿ, ಕೇಶವಾ...ಭಕ್ತಃ=ಕೇಶವ-ಶ್ರೀನಾರಾಯಣನು, ಆನಂದತೀರ್ಥ-ಶ್ರೀಮಧ್ವಾಚಾರ್ಯರು ಇವರ, ಶ್ರೀಮತ್-ಕಾಂತಿಯುಳ್ಳ, ಪಾದಾಬ್ಜ -ಪಾದಕಮಲಗಳಲ್ಲಿ, ಭಕ್ತಃ-ಭಕ್ತನು (ತ್ರಿವಿಕ್ರಮಪಂಡಿತಾಚಾರ್ಯನು), ಹರೇಃ-ಶ್ರೀನಾರಾಯಣನ, ಚ-ಮತ್ತು, ಅಸ್ಯ-ಈ, ವಾಯುದೇವಸ್ಯ-ಶ್ರೀಮುಖ್ಯಪ್ರಾಣದೇವನ, ಸ್ತುತಿಂ-ಸ್ತೋತ್ರವನ್ನು, ಅಕೃತ-ಮಾಡಿದನು. ಯೇ-ತು-ಯಾವ ಭಕ್ತಜನರು, ಏತಯಾ-ಇದರಿಂದ ಮಾಡಲ್ಪಟ್ಟ ಈ, ತತ್ಪಾದಾರ್ಚಾದರೇಣ=ತತ್-ಆ ಹರಿವಾಯುಗಳ, ಪಾದ-ಪಾದಗಳ, ಅರ್ಚಾ-ಪೂಜೆಯಲ್ಲಿ, ಆದರೇಣ-ಭಕ್ತಿಯಿಂದ, ಗ್ರಥಿತಪದಲಸನ್ಮಾಲಯಾ=ಗ್ರಥಿತ-ಕಟ್ಟಲ್ಪಟ್ಟ, ಪದ-ಪದಗಳ, ಲಸತ್-ಪ್ರಕಾಶಿಸುವ, ಮಾಲಯಾ-ಮಾಲಿಕೆಯಿಂದ, ಅಮೂ-ಈ ಹರಿವಾಯುಗಳನ್ನು, ಸಂರಾಧ್ಯ-ಸಂಪೂಜಿಸಿ, ನಮಂತಿ-ನಮಸ್ಕರಿಸುತ್ತಾರೋ, ಏತೇ-ಈ ಜನರು, ಪ್ರತತಮತಿಗುಣಾಃ=ಪ್ರತತ-ವಿಸ್ತೃತಗಳಾದ, ಮತಿ-ಅಪರೋಕ್ಷಜ್ಞಾನ, ಗುಣಾಃ-ಭಕ್ತ್ಯಾದಿ ಗುಣಗಳು, ಇವುಗಳುಳ್ಳವರಾಗಿ, ಮುಕ್ತಿಂ-ಮೋಕ್ಷವನ್ನು, ವ್ರಜಂತಿ- ಹೊಂದುತ್ತಾರೆ.

ಸುಬ್ರಹ್ಮಣ್ಯಪಂಡಿತರ ಮಗನೂ, ಹರಿಮಧ್ವಗುರುಗಳ ಪಾದಕಿಂಕರನೂ ಆದ ತ್ರಿವಿಕ್ರಮಪಂಡಿತಾಚಾರ್ಯನು ಹರಿವಾಯುಗಳ ಸ್ತೋತ್ರರೂಪವಾದ ಈ ಸ್ತುತಿಯನ್ನು ಮಾಡಿದನು. ಹರಿವಾಯುಗಳ ಪಾದಸೇವೆಯಲ್ಲಿ ಆದರದಿಂದ ಮಾಡಿದ ಪದಮಾಲಿಕಾರೂಪವಾದ ಈ ವಾಯುಸ್ತುತಿಯಿಂದ ಈ ಹರಿವಾಯುಗಳನ್ನು ಪೂಜಿಸುವ ಪುರುಷರು ಅಪರೋಕ್ಷಜ್ಞಾನಭಕ್ತ್ಯಾದಿ ಗುಣಗಳನ್ನು ಪಡೆದು ಕೊನೆಗೆ ಮೋಕ್ಷವನ್ನು ಹೊಂದುವರು. (ಈ ಶ್ಲೋಕಪುರಶ್ಚರಣದಿಂದ ಜ್ಞಾನಭಕ್ತಿವೈರಾಗ್ಯ ಮೋಕ್ಷಲಾಭ.) ॥ ೪೧ ॥

ಎಂಬಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರು ರಚಿಸಿದ

ಶ್ರೀವಾಯುಸ್ತುತಿಯು ಕನ್ನಡಪ್ರತಿಪದಾರ್ಥತಾತ್ಪರ್ಯಸಹಿತವಾಗಿ ಮುಗಿದುದು

## ಖಿಲವಾಯುಸ್ತುತಿಃ

**ವಾಯುರ್ಭೀಮೋ ಭೀಮನಾದೋ ಮಹೌಜಾಃ ಸರ್ವೇಷಾಂ ಚ ಪ್ರಾಣಿನಾಂ ಪ್ರಾಣಭೂತಃ । ಅನಾವೃತ್ತಿರ್ದೇಹಿನಾಂ ದೇಹಪಾತೇ ತಸ್ಮಾದ್ವಾಯುರ್ದೇವದೇವೋ ವಿಶಿಷ್ಟಃ ॥ ೧ ॥**

ವಾಯುಃ–ಶ್ರೀಮುಖ್ಯಪ್ರಾಣನು, ಭೀಮಃ–ಶತ್ರುಗಳಿಗೆ ಭಯಂಕರನು, ಭೀಮನಾದಃ=ಭೀಮ–ಭಯಂಕರವಾದ, ನಾದಃ–ಗರ್ಜನೆಯುಳ್ಳವನು, ಮಹೌಜಾಃ=ಮಹಾ–ಶ್ರೇಷ್ಠವಾದ, ಓಜಾಃ–ಪ್ರತಾಪವುಳ್ಳವನು, ಸರ್ವೇಷಾಂ–ಎಲ್ಲ, ಪ್ರಾಣಿನಾಂ–ಪ್ರಾಣಿಗಳಿಗೆ, ಪ್ರಾಣಭೂತಃ–ಜೀವದಂತಿರುವವನು, ದೇಹಿನಾಂ–ಪ್ರಾಣಿಗಳ, ದೇಹಪಾತೇ=ದೇಹ–ಶರೀರದ, ಪಾತೇ(ಸತಿ)–ಪತನವಾಗುತ್ತಿರಲು, ಅನಾವೃತ್ತಿಃ=ಅನ–ಶ್ರೀಮುಖ್ಯಪ್ರಾಣನಿಗೆ, ಅವೃತ್ತಿಃ–ಆ ದೇಹದಲ್ಲಿ ಇಲ್ಲದಿರುವಿಕೆಯು, ತಸ್ಮಾತ್–ಆದುದರಿಂದ, ವಾಯುಃ–ಶ್ರೀಮುಖ್ಯಪ್ರಾಣನು, ದೇವದೇವಃ–ದೇವತೆಗಳಿಗೂ ದೇವತೆಯಾದವನು, ವಿಶಿಷ್ಟಃ–ಶ್ರೇಷ್ಠನಾದವನು.

ಸಿಂಹನಾದದಿಂದ ಶತ್ರುಗಳಿಗೆ ಭಯವನ್ನು ಹುಟ್ಟಿಸುವ ಕಡುಪರಾಕ್ರಮಿಯಾದ ಶ್ರೀಮುಖ್ಯಪ್ರಾಣನು ಜೀವರನ್ನು ಜೀವಿಸುವಂತೆ ಮಾಡುವವನು. ಎಂದರೆ, ಜೀವರ ದೇಹದಲ್ಲಿ ವಾಯುದೇವರು ಇದ್ದರೆ ಮಾತ್ರ ಜೀವರು ಆ ದೇಹದಲ್ಲಿರುತ್ತಾರೆ. ಜೀವರ ದೇಹಪಾತವಾಗುವಾಗ ವಾಯುದೇವರು ಆ ದೇಹದಲ್ಲಿರುವುದಿಲ್ಲ. ಎಂದರೆ ಪ್ರಾಣದೇವರು ದೇಹದಿಂದ ಹೊರಟ ಕೂಡಲೇ ಜೀವವಿಲ್ಲದ ಶವವಾಗಿ ಬೀಳುತ್ತದೆ (ಆದಕಾರಣ ಸರ್ವದೇವತೆಗಳಿಗಿಂತಲೂ ವಾಯುದೇವರು ಶ್ರೇಷ್ಠರೆಂದು ಭಾವ.) ॥ ೧ ॥

**ಜ್ಞಾನೇ ವಿರಾಗೇ ಹರಿಭಕ್ತಿಭಾವೇ ಧೃತಿಸ್ಥಿತಿಪ್ರಾಣಬಲೇಷು ಯೋಗೇ । ಬುದ್ಧೌ ಚ ನಾನ್ಯೋ ಹನುಮತ್ಸಮಾನಃ ಪುಮಾನ್ ಕದಾಚಿತ್ ಕ್ವ ಚ ಕಶ್ಚ ನೈವ ॥ ೨ ॥**

ಜ್ಞಾನೇ–ತತ್ತ್ವಜ್ಞಾನದಲ್ಲಿ, ವಿರಾಗೇ–ವೈರಾಗ್ಯದಲ್ಲಿ, ಹರಿಭಕ್ತಿಭಾವೇ=ಹರಿ–ನಾರಾಯಣನಲ್ಲಿ, ಭಕ್ತಿ–ಭಕ್ತಿಯೆಂಬ, ಭಾವೇ–ತಾತ್ಪರ್ಯದಲ್ಲಿ, ಧೃತಿಸ್ಥಿತಿಪ್ರಾಣಬಲೇಷು=ಧೃತಿ–ಧೈರ್ಯ, ಸ್ಥಿತಿ–ಪ್ರತಿಷ್ಠೆ, ಪ್ರಾಣಬಲೇಷು–ಆತ್ಮಬಲ, ಇವುಗಳಲ್ಲಿ. ಬುದ್ಧೌ ಚ–ಬುದ್ಧಿಯಲ್ಲಿಯೂ ಕೂಡ, ಹನುಮತ್ಸಮಾನಃ=ಹನುಮತ್–ಹನುಮಂತನಿಗೆ, ಸಮಾನಃ–ಸದೃಶನಾದ, ಪುಮಾನ್–ಪುರುಷನು, ಕದಾಚಿತ್–ಎಂದಿಗಾದರೂ, ಕ್ವಚ–ಎಲ್ಲಿಯಾದರೂ, ಕಶ್ಚ–ಯಾರೊಬ್ಬನೂ ನೈವ (ಅಸ್ತಿ)–ಇಲ್ಲವೇ ಇಲ್ಲ.

ಜ್ಞಾನ-ಭಕ್ತಿ-ವೈರಾಗ್ಯ-ಧೈರ್ಯ-ಸ್ಥೈರ್ಯ-ಆತ್ಮಬಲ-ಬುದ್ಧಿ-ಗುಣ ಇವು ಗಳಲ್ಲಿ ಹನುಮಂತನಿಗೆ ಸಮಾನನು ಯಾವನೂ ಇಲ್ಲ ॥ ೨ ॥

**ವಾತೇನ ಕುಂತ್ಯಾಂ ಬಲವಾನ್ ಸ ಜಾತಃ ಶೂರಸ್ತಪಸ್ವೀ ದ್ವಿಷತಾಂ ನಿಹಂತಾ । ಸತ್ಯೇ ಚ ಧರ್ಮೇ ಚ ರತಃ ಸದೈವ ಪರಾಕ್ರಮೇ ಶತ್ರುಭಿರಪ್ರಧೃಷ್ಯಃ ॥ ೩ ॥**

ಸಃ–ಆ ಭೀಮನು, ವಾತೇನ–ಮುಖ್ಯಪ್ರಾಣದೇವನಿಂದ, ಕುಂತ್ಯಾಂ–ಕುಂತೀದೇವಿಯಲ್ಲಿ, ಬಲವಾನ್‌ಸನ್–ಬಲಿಷ್ಠನಾಗಿ, ಜಾತಃ–ಹುಟ್ಟಿದನು. ಸಃ–ಆತನು, ಶೂರಃ–ಶೌರ್ಯವುಳ್ಳವನು, ತಪಸ್ವೀ–ತಪಸ್ಸುವುಳ್ಳವನು, ದ್ವಿಷತಾಂ–ಶತ್ರುಗಳನ್ನು, ನಿಹಂತಾ–ಕೊಲ್ಲತಕ್ಕವನು, ಸದೈವ–ಯಾವಾಗಲೂ, ಸತ್ಯೇ ಚ–ಸತ್ಯದಲ್ಲಿಯೂ, ಧರ್ಮೇ ಚ–ಧರ್ಮದಲ್ಲಿಯೂ ರತಃ–ಆಸಕ್ತಿಯುಳ್ಳವನು, ಪರಾಕ್ರಮೇ–ಪರಾಕ್ರಮವಿಷಯದಲ್ಲಿ, ಶತ್ರುಭಿಃ–ವೈರಿಗಳಿಂದ, ಅಪ್ರಧೃಷ್ಯಃ–ಸೋಲಿಸಲು ಅಶಕ್ಯನು.

ಸತ್ಯ-ಧರ್ಮ-ಶೌರ್ಯ-ಪರಾಕ್ರಮ-ತಪಸ್ಸು ಮುಂತಾದ ಗುಣಗಳಿಂದ ಕೂಡಿ, ಆ ಹನುಮಂತನೇ ಭೀಮನಾಗಿ ವಾಯುದೇವನಿಂದ ಕುಂತೀದೇವಿಯಲ್ಲಿ ಅವತರಿಸಿದನು ॥ ೩ ॥

**ಪ್ರಥಮೋ ಹನುಮನ್ನಾಮ ದ್ವಿತೀಯೋ ಭೀಮ ಏವ ಚ । ಪೂರ್ಣಪ್ರಜ್ಞಸ್ತೃತೀಯಸ್ತು ಭಗವತ್ಕಾರ್ಯಸಾಧಕಃ ॥ ೪ ॥**

ಹನುಮನ್ ನಾಮ–ಹನುಮಂತನೆಂದು ಪ್ರಸಿದ್ಧನಾದವನು, ಪ್ರಥಮಃ–ಮೊದಲನೆ ಅವತಾರನಾದವನು, ಭೀಮ ಏವ ಚ–ಭೀಮಸೇನನೇ, ದ್ವಿತೀಯಃ–ಎರಡನೆಯ ಅವತಾರನಾದವನು, ಪೂರ್ಣಪ್ರಜ್ಞಸ್ತು–ಶ್ರೀಮಧ್ವಾಚಾರ್ಯರಾದರೋ, ತೃತೀಯಃ–ಮೂರನೆಯ ಅವತಾರರಾದವರು. ಹೀಗೆ (ವಾಯುಃ–ಶ್ರೀಮುಖ್ಯಪ್ರಾಣನು), ಭಗವತ್ಕಾರ್ಯಸಾಧಕಃ=ಭಗವತ್–ಶ್ರೀನಾರಾಯಣನ, ಕಾರ್ಯ–ಜಗತ್ತಿನ ಕಾರ್ಯಕ್ಕೆ, ಸಾಧಕಃ–ಸಹಾಯ ಮಾಡತಕ್ಕವನು.

ಶ್ರೀಮುಖ್ಯಪ್ರಾಣನು ಹನುಮದ್ಭೀಮಮಧ್ವಾವತಾರಗಳನ್ನು ತಾಳಿ, ಶ್ರೀ ರಾಮ-ಕೃಷ್ಣ-ವೇದವ್ಯಾಸಾವತಾರಗಳಿಂದ ಶಿಷ್ಟರಕ್ಷಣ ದುಷ್ಟಶಿಕ್ಷಣಕಾರ್ಯ ಗಳನ್ನು ಮಾಡುವ ಭಗವಂತನಿಗೆ ಸಹಾಯಕನಾಗಿದ್ದಾನೆ ॥ ೪ ॥

**ಬ್ರಹ್ಮಾಂತಾ ಗುರವಃ ಸಾಕ್ಷಾದಿಷ್ಟಂ ದೈವಂ ಶ್ರಿಯಃ ಪತಿಃ । ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ ॥**

ಮೇ-ನನಗೆ. ಜನ್ಮಜನ್ಮನಿ-ಪ್ರತಿಜನ್ಮದಲ್ಲಿಯೂ, ಬ್ರಹ್ಮಾಂತಾಃ=ಬ್ರಹ್ಮ-ಬ್ರಹ್ಮದೇವನೇ, ಅಂತಾಃ—ಕೊನೆಯುವನಾಗಿರುವ ದೇವತೆಗಳು, ಸಾಕ್ಷಾತ್-ಪ್ರತ್ಯಕ್ಷವಾಗಿ, ಗುರವಃ-ಗುರುಗಳು, ಸಂತು-ಇರಲಿ, ಶ್ರಿಯಃ-ಲಕ್ಷ್ಮೀದೇವಿಗೆ, ಪತಿಃ-ಗಂಡನಾದ ಶ್ರೀಹರಿಯು, ಇಷ್ಟಂ ದೈವಂ-ಇಷ್ಟದೇವತೆಯು, ಅಸ್ತು-ಇರಲಿ. ಶ್ರೀಮದಾಚಾರ್ಯಾಃ-ಶ್ರೀಮನ್ಮಧ್ವಾಚಾರ್ಯರು, ಆಚಾರ್ಯಾಃ-ಮುಖ್ಯ ತತ್ವೋಪದೇಶಕರೇ, ಸಂತು-ಆಗಿರಲಿ.

ಬ್ರಹ್ಮಪದದಿಂದ ಚತುರ್ಮುಖಬ್ರಹ್ಮನು ಶ್ರೀವಾಯುದೇವರು ಇವರಿಬ್ಬರೆಂದು ತಿಳಿಯಬೇಕು. ತಾರತಮ್ಯ ಪ್ರಕಾರ ಜೀವರಿಗೆ ತಮ್ಮ ವಿದ್ಯೋಪದೇಶಕರನ್ನು ಮೊದಲ್ಗೊಂಡು ಉತ್ತಮೋತ್ತಮರಾಗಿರುವವರು ಬ್ರಹ್ಮದೇವರ ಪರ್ಯಂತವಾಗಿ ಎಲ್ಲರೂ ಗುರುಗಳು.

ಅಂತಹ ಗುರುಗಳಿಂದ ತತ್ವೋಪದೇಶ ಪಡೆದು, ಪ್ರತಿ ಜನ್ಮದಲ್ಲಿ ಮಾಧ್ವನಾಗಿ ಹುಟ್ಟಿ ಇಷ್ಟದೇವತೆಯಾದ ಹರಿಯೇ ಸರ್ವೋತ್ತಮನೆಂದು ಭಜಿಸುವಂತಾಗಲಿ (ಎಂದು ಭಕ್ತರ ಪ್ರಾರ್ಥನೆ.) ॥ ೩ ॥

**ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ । ವಾಯೋಃ ರಾಮವಚೋ ನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪುರ್ಮಧ್ವೋ ಯತ್ತು ತೃತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ ॥ ೬ ॥**

ವೇದವಚನೇ- ವೇದದ ವಾಕ್ಯದಲ್ಲಿ, ಯಸ್ಯ-ಯಾವ [ಮುಖ್ಯಪ್ರಾಣ]ನ, ದಿವ್ಯಾನಿ-ಶ್ರೇಷ್ಠಗಳಾದ, ತ್ರೀಣಿ-ಮೂರು, ರೂಪಾಣಿ-ಅವತಾರಸ್ವರೂಪಗಳು, ಅಲಂ-ಚೆನ್ನಾಗಿ, ಉದಿತಾನಿ-ಹೇಳಲ್ಪಟ್ಟಿವೆಯೋ, ದೇವಸ್ಯ-ಕ್ರೀಡಾದಿ ಗುಣಗಳುಳ್ಳ, ವಾಯೋಃ-ಶ್ರೀಮುಖ್ಯಪ್ರಾಣನ, ಮಹತ್-ಶ್ರೇಷ್ಠವಾದ, ಭರ್ಗಃ-ಭರಣಜ್ಞಾನವನ್ನೀಯುವ, ತತ್-ಆ ರೂಪವು, ಬಟ್-ಬಲಸ್ವರೂಪ, ದರ್ಶತಂ-ಜ್ಞಾನಸ್ವರೂಪ, ಇತ್ಥಮೇವ-ಎಂತೆಂದೇ, ನಿಹಿತಂ-ಸ್ಥಿತವಾದುದು (ಇರತಕ್ಕದು), ಪ್ರಥಮಕಂ-ಮೊದಲನೆಯ, ವಪುಃ-ರೂಪವು, ರಾಮವಚೋ-ನಯಂ=ರಾಮ-ಶ್ರೀರಾಮನ, ವಚಃ-ಮಾತನ್ನು, ನಯಂ-ಸೀತೆಯ ಬಳಿಗೆ ಒಯ್ಯತಕ್ಕದ್ದು (ಹನುಮಂತನೆಂಬುದು), ದ್ವಿತೀಯಂ-ಎರಡನೆಯ, ವಪುಃ-ರೂಪವು, ಪೃಕ್ಷಃ-ಕೌರವಾದಿಗಳ ಸೇನೆಯನ್ನು ನಾಶಮಾಡತಕ್ಕದ್ದು (ಭೀಮ

ನೆಂಬುದು), ಯತ್ತು–ಯಾವುದು, ಮಧ್ವಃ–ಶ್ರೀಮಧ್ವಾಚಾರ್ಯರೆಂಬ, ವಪುಃ–ರೂಪವೋ, ಏತತ್–ಇದು, ತೃತೀಯಂ–ಮೂರನೆಯದು. ಅಮುನಾ– ಈ ಮಧ್ವಸ್ವರೂಪದಿಂದ, ಕೇಶವೇ–ಬ್ರಹ್ಮರುದ್ರನಿಯಾಮಕನಾದ ಶ್ರೀನಾರಾಯಣನ ವಿಷಯದಲ್ಲಿ, ಗ್ರಂಥಃ–ಸರ್ವೋತ್ತಮತ್ವವನ್ನು ಸಾಧಿಸುವ ಗ್ರಂಥವು, ಕೃತಃ–ಮಾಡಲ್ಪಟ್ಟಿತು.

'ಬಳಿತ್ಥಾ ತದ್ವಪುಷೇಧಾಯಿದರ್ಶತ'ಮಿತ್ಯಾದಿ ವೇದಸೂಕ್ತದಲ್ಲಿ ಹೇಳಲ್ಪಟ್ಟ ಶ್ರೀಮುಖ್ಯಪ್ರಾಣನ ಮೂರು ರೂಪಗಳು ಕೂಡ ಲೋಕಗಳಿಗೆ ಪೋಷಕಗಳೂ ಜ್ಞಾನಪ್ರದಗಳೂ ಆಗಿದ್ದು, ಬಲಜ್ಞಾನಸ್ವರೂಪಗಳು. ಅದರಲ್ಲಿ ಮೊದಲನೆಯ ಅವತಾರವು ಹನುಮಂತನು, ಎರಡನೆಯದು ಭೀಮನು, ಮೂರನೆಯದು ಶ್ರೀಮಧ್ವಾಚಾರ್ಯರು. ಈ ಮೂರನೆಯ ಅವತಾರದಲ್ಲಿಯೇ ಹರಿಸರ್ವೋತ್ತಮತ್ವವನ್ನು ಸಾಧಿಸುವ ಗ್ರಂಥಗಳು ರಚಿಸಲ್ಪಟ್ಟುವು ॥ ೬ ॥

**ಮಹಾವ್ಯಾಕರಣಾಂಭೋಧಿಮಂಥಮಾನಸಮಂದರಮ್ ।**
**ಕವಯಂತಂ ರಾಮಕೀರ್ತ್ಯಾ ಹನೂಮಂತಮುಪಾಸ್ಮಹೇ ॥ ೭ ॥**

ಮಹಾವ್ಯಾಕರಣ–ಮಹಾವ್ಯಾಕರಣಶಾಸ್ತ್ರವೆಂಬ, ಅಂಭೋಧಿ–ಸಮುದ್ರದ, ಮಂಥ–ಮಥನದಲ್ಲಿ, ಮಾನಸ–ಮನಸ್ಸೆಂಬ, ಮಂದರಂ–ಮಂದರಪರ್ವತವುಳ್ಳ, ರಾಮಕೀರ್ತ್ಯಾ–ಶ್ರೀರಾಮನ ಯಶಸ್ಸಿನಿಂದ, ಕವಯಂತಂ–ಕವಿತೆ ಮಾಡತಕ್ಕ, ಹನೂಮಂತಂ–ಹನುಮಂತನನ್ನು, ಉಪಾಸ್ಮಹೇ–ಸೇವಿಸುತ್ತೇವೆ.

ಸಮುದ್ರವನ್ನು ಮಂದರದಿಂದ ಮಥಿಸಿ ಅಮೃತವನ್ನು ತೆಗೆದಂತೆ, ಮಹಾವ್ಯಾಕರಣವನ್ನು ಮನಸ್ಸಿನಿಂದ ವಿಮರ್ಶಿಸಿ, ಅದರ ಸಾರವನ್ನರಿತು ಶ್ರೀರಾಮ ಕೀರ್ತಿಯ ಚರಿತ್ರೆಯನ್ನು ಕಾವ್ಯರೂಪದಿಂದ ವರ್ಣಿಸುವ ಹನುಮಂತನನ್ನು ಸೇವಿಸುವೆವು ॥ ೭ ॥

**ಮುಖ್ಯಪ್ರಾಣಾಯ ಭೀಮಾಯ ನಮೋ ಯಸ್ಯ ಭುಜಾಂತರಮ್ ।**
**ನಾನಾವೀರಸುವರ್ಣಾನಾಂ ನಿಕಷಾಶ್ಮಾಯಿತಂ ಬಭೌ ॥ ೮ ॥**

ಯಸ್ಯ–ಯಾವ ಭೀಮಸೇನನ, ಭುಜಾಂತರಂ–ತೋಳುಗಳ ಮಧ್ಯವು (ಎದೆಯು), ನಾನಾವೀರಸುವರ್ಣಾನಾಂ=ನಾನಾ–ಅನೇಕಪ್ರಕಾರವುಳ್ಳ, ವೀರ–ಪರಾಕ್ರಮಿಗಳೆಂಬ, ಸುವರ್ಣಾನಾಂ–ಚಿನ್ನಗಳಿಗೆ, ನಿಕಷಾಶ್ಮಾಯಿತಂ–ಒರೆಗಲ್ಲಿನಂತಿದ್ದುದಾಗಿ, ಬಭೌ–ಶೋಭಿಸಿತೋ, ಭೀಮಾಯ–ಭೀಮಸೇನಸ್ವರೂಪನಾದ, ಮುಖ್ಯಪ್ರಾಣಾಯ–ಶ್ರೀವಾಯುದೇವನಿಗೋಸ್ಕರ, ನಮಃ–ನಮಸ್ಕಾರ.

ಭೀಮಸೇನನ ತೋಳಿನ ನಡುವೆ ಸಿಲುಕಿ ಬದುಕಿದ ವೀರರೇ ವೀರರೆಂ
ವೀರತ್ವದ ಪರೀಕ್ಷೆಗೆ ಒರೆಗಲ್ಲಿನಂತಿದ್ದ ಎದೆಯುಳ್ಳ ಆ ಭೀಮಸೇನನಿಗೆ ವಂದ

**ಸ್ವಾಂತಸ್ಥಾನಂತಶಯ್ಯಾಯ ಪೂರ್ಣಜ್ಞಾನರಸಾರ್ಣಸೇ ।**
**ಉತ್ತುಂಗವಾಕ್ತರಂಗಾಯ ಮಧ್ವದುಗ್ಧಾಬ್ಧಯೇ ನಮಃ ॥ ೯**

ಸ್ವಾಂತಸ್ಥಾನಂತಶಯ್ಯಾಯ=ಸ್ವಾಂತಸ್ಥ–ತನ್ನೊಳಗಿದ್ದ, ಅನಂತಶಯ್ಯಾಯ ಶೇಷಶಾಯಿಯಾದ ಶ್ರೀಹರಿಯುಳ್ಳ, ಪೂರ್ಣಜ್ಞಾನರಸಾರ್ಣಸೇ=ಪೂರ್ಣ ಪರಿಪೂರ್ಣವಾದ, ಜ್ಞಾನರಸ–ಜ್ಞಾನಸಾರವೆಂಬ, ಅರ್ಣಸೇ–ನೀರುಳ್ಳ ಉತ್ತುಂಗವಾಕ್ತರಂಗಾಯ=ಉತ್ತುಂಗ–ಉನ್ನತಗಳಾದ, ವಾಕ್–ವಚನಗಳೆಂಬ ತರಂಗಾಯ–ಅಲೆಗಳುಳ್ಳ, ಮಧ್ವದುಗ್ಧಾಬ್ಧಯೇ=ಮಧ್ವ–ಶ್ರೀಮಧ್ವಾಚಾರ್ಯ ರೆಂಬ, ದುಗ್ಧಾಬ್ಧಯೇ–ಕ್ಷೀರಸಮುದ್ರಕ್ಕೆ, ನಮಃ–ನಮಸ್ಕಾರ.

ಕ್ಷೀರಸಮುದ್ರವು ಶೇಷಶಾಯಿಯಾದ ಹರಿಯಿಂದ ಕೂಡಿದುದು, ಜಲಪೂರ್ಣ ವಾದುದು, ಅಲೆಗಳಿಂದ ತುಂಬಿದುದು. ಅದರಂತೆ ಶ್ರೀಮಧ್ವಾಚಾರ್ಯರ ತನ್ನ ಹೃದಯದಲ್ಲಿ ಶೇಷಶಾಯಿಯನ್ನಿಟ್ಟುಕೊಂಡವರು, ಜ್ಞಾನಪೂರ್ಣರ ಶ್ರೇಷ್ಠ ವಚನಗಳುಳ್ಳವರು ॥ ೯ ॥

**ಯೇನಾಹಮಿಹ ದುರ್ಮಾರ್ಗಾದುದ್ಧೃತ್ಯಾಭಿನಿವೇಶಿತಃ ।**
**ಸಮ್ಯಕ್ ಶ್ರೀವೈಷ್ಣವೇ ಮಾರ್ಗೇ ಪೂರ್ಣಪ್ರಜ್ಞಂ ನಮಾಮಿ ತಮ್**

ಅಹಂ–ನಾನು, ಯೇನ–ಯಾರಿಂದ, ಇಹ–ಈ ಭೂಮಿಯಲ್ಲಿ, ದುರ್ಮಾರ್ಗಾತ್–ಕೆಟ್ಟ ಮಾರ್ಗದ ದೆಸೆಯಿಂದ, ಉದ್ಧೃತ್ಯ–ಎತ್ತಿ, ಶ್ರೀವೈಷ್ಣವೇ ವಿಷ್ಣುಸಂಬಂಧಿಯಾದ, ಮಾರ್ಗೇ–ದ್ವೈತಮತವೆಂಬ ಮಾರ್ಗದಲ್ಲಿ, ಸಮ್ಯಕ್ ಚೆನ್ನಾಗಿ, ಅಭಿನಿವೇಶಿತಃ–ಪ್ರವೇಶಿಸಲ್ಪಟ್ಟೆನೋ, ತಂ–ಆ, ಪೂರ್ಣಪ್ರಜ್ಞಂ ಶ್ರೀಮಧ್ವಾಚಾರ್ಯರನ್ನು, ನಮಾಮಿ–ನಮಸ್ಕರಿಸುತ್ತೇನೆ.

ಭೂಮಿಯಲ್ಲಿ ಹುಟ್ಟಿ ದುರ್ಮಾರ್ಗದಲ್ಲಿ ಬಿದ್ದಿದ್ದ ನನ್ನನ್ನು ಎತ್ತಿ, ಹ ಸರ್ವೋತ್ತಮನೆಂದು ತಿಳಿದು ಸೇವಿಸಲಿಕ್ಕೆ ಅನುಕೂಲವಾದ ಶ್ರೀಮಧ್ವಮತ ಸನ್ಮಾರ್ಗದಲ್ಲಿ ಪ್ರವೇಶವಿತ್ತ ಶ್ರೀಮದಾಚಾರ್ಯರಿಗೆ ವಂದನೆ ॥ ೧೦ ॥

[ಬೇರೆ ಫಲವನ್ನು ಬಯಸದೆ, ಹರಿಪ್ರೀತಿಯನ್ನು ಮಾತ್ರ ಅಪೇಕ್ಷಿಸುವ ಶ್ರೀಮಧ್ವಾ ಚಾರ್ಯರ ವಚನವನ್ನು ಹೇಳುತ್ತಾರೆ:]

**[ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।**
**ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ।**

ತುಂಬಿದವನೂ, ಸರ್ವದೋಷವಿವರ್ಜಿತಃ–ಎಲ್ಲ ದೋಷಗಳಿಂದಲೂ ರಹಿತನಾದವನೂ ಆಗಿ ಇರುವನೋ, ಪರಮಃ–ಉತ್ತಮನಾದ, ಸುಹೃತ್–ಮಿತ್ರನಾದ, ವಿಷ್ಣುಃ–(ಆ) ಶ್ರೀನಾರಾಯಣನು, ಪ್ರೀತ ಏವ–ಸಂತುಷ್ಟನಾದವನೇ ಇದ್ದರೂ, ಮೇ–ನನಗೆ, ಅಲಂ–ಚೆನ್ನಾಗಿ, ಪ್ರೀಯತಾಂ–ಪ್ರಸನ್ನನಾಗಲಿ. (ಅಥವಾ ಪ್ರೀತನಾದವನೇ ಪ್ರೀತಿ ಮಾಡಲಿ.) ಮೇ–ನನಗೆ, ವಿಷ್ಣುಃ–ಹರಿಯು, ಪರಮಃ ಸುಹೃತ್–ಶ್ರೇಷ್ಠ ಮಿತ್ರನು, ಅಲಂ–ಇಷ್ಟು ಸಾಕು.]

[ನಿರ್ದೋಷನೂ ಗುಣಪೂರ್ಣನೂ ಆದ ವಿಷ್ಣುವು ನನಗೆ ಮಿತ್ರನು. ಆತನ ಪ್ರೀತಿಯೊಂದೇ ನನಗೆ ಸಾಕು. (ಎಂದು ಪರಮ ಭಾಗವತೋತ್ತಮರಾದ ಶ್ರೀಮಧ್ವಾಚಾರ್ಯರ ಪ್ರಾರ್ಥನೆ.) ॥ ೧೨ ॥]

**ಸೂಕ್ತಿರತ್ನಾಕರೇ ರಮ್ಯೇ ಮೂಲರಾಮಾಯಣಾರ್ಣವೇ ।**
**ವಿಹರಂತೋ ಮಹೀಯಾಂಸಃ ಪ್ರೀಯಂತಾಂ ಗುರವೋ ಮಮ ॥**

ಸೂಕ್ತಿರತ್ನಾಕರೇ=ಸೂಕ್ತಿ–ಶೋಭನವಚನಗಳೆಂಬ,ರತ್ನ–ರತ್ನಗಳಿಗೆ, ಆಕರೇ–ಖನಿಯಾದ, ರಮ್ಯೇ–ಸುಂದರವಾದ, ಮೂಲರಾಮಾಯಣಾರ್ಣವೇ=ಮೂಲ–ರಾಮಾಯಣ–ಮೂಲರಾಮಾಯಣವೆಂಬ, ಅರ್ಣವೇ–ಸಮುದ್ರದಲ್ಲಿ, ವಿಹರಂತಃ–ಕ್ರೀಡಿಸುವ (ವಿಮರ್ಶಿಸುವ), ಮಹೀಯಾಂಸಃ–ಮಹಾತ್ಮರಾದ, ಗುರವಃ–ಶ್ರೀಮಧ್ವಾಚಾರ್ಯರು, ಮಮ–ನನಗೆ, ಪ್ರೀಯಂತಾಂ–ಪ್ರಸನ್ನರಾಗಲಿ ॥ ೧೩ ॥

ಶ್ರೀಮಧ್ವಾಚಾರ್ಯರು ಶತಕೋಟಿಗ್ರಂಥವಿಸ್ತಾರವಾದ, ಬ್ರಹ್ಮಲೋಕದಲ್ಲಿ ಪ್ರಸಿದ್ಧವಾದ, ಮೂಲರಾಮಾಯಣಗ್ರಂಥವನ್ನು ಚೆನ್ನಾಗಿ ತಿಳಿದು ವಿಚಾರ ಮಾಡಿದ ತತ್ತ್ವಜ್ಞಾನಿಶ್ರೇಷ್ಠರು, ಅಂತಹ ಮಹಾತ್ಮರು ನನಗೆ ಪ್ರಸನ್ನರಾಗಲಿ.

ಹನುಮದ್ಭೀಮಮಧ್ವರ ದ್ವಾದಶ ನಾಮಗಳನ್ನು ವಿವರಿಸುತ್ತಾರೆ:

**ಹನೂಮಾನಂಜನಾಸೂನುರ್ವಾಯುಪುತ್ರೋ ಮಹಾಬಲಃ ।**
**ರಾಮೇಷ್ಟಃ ಫಲ್ಗುನಸಖಃ ಪಿಂಗಾಕ್ಷೋಽಮಿತವಿಕ್ರಮಃ ॥ ೧೪ ॥**
**ಉದಧಿಕ್ರಮಣಶ್ಚೈವ ಸೀತಾಸಂದೇಶಹಾರಕಃ ।**
**ಲಕ್ಷ್ಮಣಪ್ರಾಣದಾತಾ ಚ ದಶಗ್ರೀವಸ್ಯ ದರ್ಪಹಾ ॥ ೧೫ ॥**

ಹನೂಮಾನ್ – ಜ್ಞಾನವಂತನು, ಅಂಜನಾಸೂನುಃ – ಅಂಜನಾದೇವಿಯ ಮಗನು, ವಾಯುಪುತ್ರಃ–ವಾಯುದೇವರ ಮಗನು, ಮಹಾಬಲಃ–ಶ್ರೇಷ್ಠಬಲವುಳ್ಳವನು, ರಾಮೇಷ್ಟಃ–ಶ್ರೀರಾಮನಿಗೆ ಇಷ್ಟನು, ಫಲ್ಗುನಸಖಃ–ಅರ್ಜುನನಿಗೆ

ಮಿತ್ರನು, ಪಿಂಗಾಕ್ಷಃ–ಕೆಂಪು ಕಣ್ಣಿನವನು, ಅಮಿತವಿಕ್ರಮಃ–ಅಪರಿಮಿತ ಪರಾಕ್ರಮವುಳ್ಳವನು, ಉದಧಿಕ್ರಮಣಃ–ಸಮುದ್ರ ದಾಟಿದವನು, ಸೀತಾಸಂದೇಶ-ಹಾರಕಃ–ಸೀತಾದೇವಿಗೆ ರಾಮಸಂದೇಶವನ್ನು ಒಯ್ದವನು, ಲಕ್ಷ್ಮಣಪ್ರಾಣ-ದಾತಾ–ಲಕ್ಷ್ಮಣನಿಗೆ ಪ್ರಾಣವನ್ನು ಕೊಟ್ಟವನು, ದಶಗ್ರೀವಸ್ಯ ದರ್ಪಹಾ–ರಾವಣನ ಅಹಂಕಾರವನ್ನು ಕಳೆದವನು.

**ಮಾರುತಿಃ ಪಾಂಡವೋ ಭೀಮೋ ಗದಾಪಾಣಿರ್ವೃಕೋದರಃ ।**
**ಕೌಂತೇಯಃ ಕೃಷ್ಣದೂತಶ್ಚ ಭೀಮಸೇನೋ ಮಹಾಬಲಃ ॥ ೧೬ ॥**
**ಜರಾಸಂಧಾಂತಕೋ ವೀರೋ ದುಃಶಾಸನವಿನಾಶಕಃ ।**

ಮಾರುತಿಃ–ವಾಯುದೇವನ ಮಗನು, ಪಾಂಡವಃ–ಪಾಂಡುರಾಜನ ಮಗನು, ಭೀಮಃ–ಭಯಂಕರನು, ಗದಾಪಾಣಿಃ–ಕೈಯಲ್ಲಿ ಗದೆಯುಳ್ಳವನು, ವೃಕೋ-ದರಃ–ವೃಕವೆಂಬ ಅಗ್ನಿಯು ಹೊಟ್ಟೆಯಲ್ಲಿ ಉಳ್ಳವನು, ಕೌಂತೇಯಃ–ಕುಂತೀ ದೇವಿಯ ಮಗನು, ಕೃಷ್ಣದೂತಃ–ಶ್ರೀಕೃಷ್ಣನ ದೂತನು, ಭೀಮಸೇನಃ–ಭಯಂ ಕರ ಸೇನೆಯುಳ್ಳವನು (ಅಥವಾ ಸೇನೆಯಲ್ಲಿ ಭಯಂಕರನು), ಮಹಾಬಲಃ–ಮಹತ್ತಾದ ಸಾಮರ್ಥ್ಯವುಳ್ಳವನು, ಜರಾಸಂಧಾಂತಕಃ–ಜರಾಸಂಧನಿಗೆ ಮೃತ್ಯು, ವೀರಃ–ಪರಾಕ್ರಮಿ, ದುಶ್ಶಾಸನವಿನಾಶಕಃ–ದುಶ್ಶಾಸನನನ್ನು ಕೊಂದವನು.

**ಪೂರ್ಣಪ್ರಜ್ಞೋ ಜ್ಞಾನದಾತಾ ಮಧ್ವೋ ಧ್ವಸ್ತದುರಾಗಮಃ ॥**
**ತತ್ತ್ವಜ್ಞೋ ವೈಷ್ಣವಾಚಾರ್ಯೋ ವ್ಯಾಸಶಿಷ್ಯೋ ಯತೀಶ್ವರಃ ।**
**ಶುಭತೀರ್ಥಾಭಿಧಾನಶ್ಚ ಜಿತಾಮಿತ್ರೋ ಜಿತೇಂದ್ರಿಯಃ ॥**
**ಶ್ರೀಮದಾನಂದಸನ್ನಾಮ್ನಾಮೇವಂ ದ್ವಾದಶಕಂ ಜಪೇತ್ ।**
**ಲಭತೇ ವೈಷ್ಣವೀಂ ಭಕ್ತಿಂ ಗುರುಭಕ್ತಿಸಮನ್ವಿತಾಮ್ ॥ ೧೯ ॥**

ಪೂರ್ಣಪ್ರಜ್ಞಃ–ತುಂಬಿದ ಜ್ಞಾನವುಳ್ಳವನು, ಜ್ಞಾನದಾತಾ–ಜ್ಞಾನವನ್ನು ಕೊಡುವವನು, ಮಧ್ವಃ–ಆನಂದಕರವಾದ ಶಾಸ್ತ್ರವುಳ್ಳವನು, ಧ್ವಸ್ತದುರಾ-ಗಮಃ–ದುಷ್ಟಶಾಸ್ತ್ರಗಳನ್ನು ನಾಶಮಾಡಿದವನು, ತತ್ತ್ವಜ್ಞಃ–ತತ್ತ್ವವನ್ನರಿ ತವನು, ವೈಷ್ಣವಾಚಾರ್ಯಃ–ವಿಷ್ಣುಭಕ್ತರಿಗೆ ಜ್ಞಾನೋಪದೇಶಕನು, ವ್ಯಾಸ-ಶಿಷ್ಯಃ–ವೇದವ್ಯಾಸದೇವರ ಶಿಷ್ಯನು, ಯತೀಶ್ವರಃ–ಸನ್ನ್ಯಾಸಿಗಳ ಅಧಿಪತಿಯು, ಶುಭತೀರ್ಥಾಭಿಧಾನಃ–ಶೋಭನವಾದ ಶಾಸ್ತ್ರವುಳ್ಳವನಾದುದರಿಂದ ಶುಭ ತೀರ್ಥ ಎಂಬ ಹೆಸರುಳ್ಳವನು, ಜಿತಾಮಿತ್ರಃ–ಜಯಿಸಲ್ಪಟ್ಟ ಪ್ರತಿವಾದಿಯೆಂಬ ಶತ್ರುವುಳ್ಳವನು, ಜಿತೇಂದ್ರಿಯಃ–ಇಂದ್ರಿಯಗಳನ್ನು ಜಯಿಸಿದನು, ಶ್ರೀಮ-

ದಾನಂದಸನ್ನಾಮಾ–ಶ್ರೀಮದಾನಂದತೀರ್ಥರೆಂಬ ನಿರ್ದಿಷ್ಟ ಹೆಸರುಳ್ಳವನು, (ಎಂಬುದಾಗಿ ಹನುದ್ಭೀಮಮಧ್ವರ ಹನ್ನೆರಡು ನಾಮಗಳನ್ನು ಜಪಿಸಬೇಕು. ಆದರಿಂದ) ಗುರುಭಕ್ತಿಸಮನ್ವಿತಾಂ–ಗುರುಭಕ್ತಿಯಿಂದ ಕೂಡಿದ, ವೈಷ್ಣವೀಂ–ವಿಷ್ಣುಸಂಬಂಧಿಯಾದ, ಭಕ್ತಿಂ–ಭಕ್ತಿಯನ್ನು, ಲಭತೇ–ಹೊಂದುತ್ತಾನೆ ॥ ೧೯ ॥

**ಮನೋಜವಂ ಮಾರುತತುಲ್ಯವೇಗಂ ಜಿತೇಂದ್ರಿಯಂ ಬುದ್ಧಿಮತಾಂ ವರಿಷ್ಠಮ್ । ವಾತಾತ್ಮಜಂ ವಾನರಯೂಥಮುಖ್ಯಂ ಶ್ರೀರಾಮದೂತಂ ಶಿರಸಾ ನಮಾಮಿ ॥ ೨೦ ॥**

ಮನೋಜವಂ–ಮನಸ್ಸಿನಂತೆ ವೇಗವುಳ್ಳ, ಮಾರುತತುಲ್ಯವೇಗಂ=ಮಾರುತ–ವಾಯುವಿಗೆ, ತುಲ್ಯ–ಸಮಾನವಾದ, ವೇಗಂ–ಜವವುಳ್ಳ, ಜಿತೇಂದ್ರಿಯಂ–ಇಂದ್ರಿಯಂಗಳನ್ನು ಜಯಿಸಿದ, ಬುದ್ಧಿಮತಾಂ–ಬುದ್ಧಿಯುಳ್ಳವರಿಗೆ, ವರಿಷ್ಠಂ–ಶ್ರೇಷ್ಠನಾದ, ವಾತಾತ್ಮಜಂ=ವಾತ–ವಾಯುದೇವರ, ಆತ್ಮಜಂ–ಮಗನಾದ, ವಾನರಯೂಥಮುಖ್ಯಂ=ವಾನರ–ಕಪಿಗಳ, ಯೂಥ–ತಂಡಕ್ಕೆ, ಮುಖ್ಯಂ–ಶ್ರೇಷ್ಠನಾದ, ಶ್ರೀರಾಮದೂತಂ–ಶ್ರೀರಾಮಚಂದ್ರನ ದೂತನಾದ ಹನುಮಂತನನ್ನು, ಶಿರಸಾ–ತಲೆಬಾಗಿ, ನಮಾಮಿ–ನಮಸ್ಕರಿಸುತ್ತೇನೆ.

ಗಾಳಿಯಂತೆಯೂ ಮನಸ್ಸಿನಂತೆಯೂ ವೇಗವುಳ್ಳವನೂ, ಜಿತೇಂದ್ರಿಯನೂ, ಬುದ್ಧಿವಂತನೂ, ಕಪಿಸೇನೆಯಲ್ಲಿ ಶ್ರೇಷ್ಠನೂ, ಶ್ರೀರಾಮದೂತನೂ ಆದ ವಾಯುಪುತ್ರನಾದ ಹನುಮಂತನನ್ನು ವಂದಿಸುತ್ತೇನೆ ॥ ೨೦ ॥

**ಬುದ್ಧಿರ್ಬಲಂ ಯಶೋ ಧೈರ್ಯಂ ನಿರ್ಭಯತ್ವಮರೋಗತಾ । ಅಜಾಡ್ಯಂ ವಾಕ್ಪಟುತ್ವಂ ಚ ಹನುಮತ್ಸ್ಮರಣಾದ್ಭವೇತ್ ॥ ೨೧ ॥**

ಬುದ್ಧಿಃ–ಬುದ್ಧಿ, ಬಲಂ–ಸಾಮರ್ಥ್ಯ, ಯಶಃ–ಕೀರ್ತಿ, ಧೈರ್ಯಂ–ಧೈರ್ಯ, ನಿರ್ಭಯತ್ವಂ–ಹೆದರದಿರುವುದು, ಅರೋಗತಾ–ಆರೋಗ್ಯ, ಅಜಾಡ್ಯಂ ಆಲಸ್ಯವಿಲ್ಲದಿರುವುದು, ವಾಕ್ಪಟುತ್ವಂ ಚ–ಮಾತಿನ ಚಮತ್ಕಾರ, ಇವು, ಹನುಮತ್–ಹನುಮಂತನ, ಸ್ಮರಣಾತ್–ನೆನಹಿನ ದೆಸೆಯಿಂದ, ಭವೇತ್–ಆಗುವುದು (ಲಭಿಸುವುದು).

ಯಾವ ಕೆಲಸದ ಆರಂಭದಲ್ಲಿಯಾದರೂ ಹನುಮಂತನನ್ನು ನೆನೆಸಿಕೊಂಡರೆ ಬುದ್ಧಿ ಬಲ ಮುಂತಾದ ಗುಣಗಳು ವೃದ್ಧಿಯಾಗುವುವು ॥ ೨೧ ॥

**ನ ಮಾಧವಸಮೋ ದೇವೋ ನಚ ಮಧ್ವಸಮೋ ಗುರುಃ । ತದ್ವಾಕ್ಯಸಮಂ ಶಾಸ್ತ್ರಂ ನಚ ತಸ್ಯ ಸಮಃ ಪುಮಾನ್ ॥ ೨೨ ॥**

ಮಾಧವಸಮಃ–ನಾರಾಯಣನಿಗೆ ಸಮಾನನಾದ, ದೇವಃ–ದೇವರು, ನ–ಇಲ್ಲ, ಮಧ್ವಸಮಃ–ಶ್ರೀಮಧ್ವಾಚಾರ್ಯರಿಗೆ ಸಮಾನರಾದ, ಗುರುಶ್ಚ–ಗುರುಗಳೂ ಕೂಡ, ನ–ಇಲ್ಲ, ತದ್ವಾಕ್ಯಸಮಂ–ತತ್–ಆ ಮಧ್ವಾಚಾರ್ಯರ, ವಾಕ್ಯ–ವಚನಕ್ಕೆ, ಸಮಂ–ಸಮಾನವಾದ, ಶಾಸ್ತ್ರಂ–ಶಾಸ್ತ್ರ, ನ–ಇಲ್ಲ. ತಸ್ಯ–ಆ ಮಧ್ವಾಚಾರ್ಯರಿಗೆ, ಸಮಃ–ಸಮಾನನಾದ, ಪುಮಾನ್ ಚ–ಪುರುಷನೂ. ನ–ಇಲ್ಲ.

ದೇವರಲ್ಲಿ ನಾರಾಯಣನ ಸಮರಿಲ್ಲ, ಗುರುಗಳಲ್ಲಿ ಶ್ರೀಮಧ್ವಾಚಾರ್ಯರ ಸಮರಿಲ್ಲ, ಶಾಸ್ತ್ರಗಳಲ್ಲಿ ದ್ವೈತಶಾಸ್ತ್ರಕ್ಕೆ ಸಮಾನವಿಲ್ಲ, ಪುರುಷರಲ್ಲಿ ಶ್ರೀ ಮಧ್ವಾಚಾರ್ಯರಿಗೆ ಸಮರಿಲ್ಲ ॥ ೨೨ ॥

**ಭೀಮಸೇನಸಮೋ ನಾಸ್ತಿ ಸೇನಯೋರುಭಯೋರಪಿ ।**
**ಪಾಂಡಿತ್ಯೇ ಚ ಪಟುತ್ವೇ ಚ ಶೂರತ್ವೇ ಚ ಬಲೇಽಪಿ ಚ ॥ ೨೩ ॥**

ಉಭಯೋಃ–ಎರಡೂ, ಸೇನಯೋರಪಿ–ಸೇನೆಗಳಲ್ಲಿ ಕೂಡ, ಪಾಂಡಿತ್ಯೇ ಚ–ವಿದ್ವತ್ತ್ವದಲ್ಲಿಯಾಗಲಿ, ಪಟುತ್ವೇ ಚ–ಚಾತುರ್ಯದಲ್ಲಿಯಾಗಲಿ, ಶೂರತ್ವೇ ಚ–ಪರಾಕ್ರಮದಲ್ಲಿಯಾಗಲಿ, ಬಲೇಽಪಿ ಚ–ಸಾಮರ್ಥ್ಯದಲ್ಲಿಯಾಗಲಿ, ಭೀಮಸೇನಸಮಃ–ಭೀಮಸೇನನಿಗೆ ಸಮಾನನು, ನಾಸ್ತಿ–ಇಲ್ಲ.

ಕೌರವ ಪಾಂಡವರ ಸೇನೆಗಳೆರಡರಲ್ಲಿಯೂ ಪಾಂಡಿತ್ಯ ಮೊದಲಾದ ಗುಣಗಳ ವಿಷಯದಲ್ಲಿ ಭೀಮಸೇನನಿಗೆ ಸಮಾನನಾದವನು ಯಾವನೂ ಇರುವುದಿಲ್ಲ (ಎಂಬ ಭಾರತ ವಾಕ್ಯದಿಂದ ಈ ಸಂಗ್ರಹ ಸಂಪೂರ್ಣವಾಗಿದೆ.) ॥ ೨೩ ॥

ಇತಿ ಖಿಲವಾಯುಸ್ತುತಿಃ ಸಮಾಪ್ತಾ

ಶ್ರೀಕೃಷ್ಣಾರ್ಪಣಮಸ್ತು

---

ಪಾವಂಜೆ ಗುರುರಾವ್ ಅಂಡ್ ಸನ್ಸ್ ಇವರಿಂದ ಉಡುಪಿ ಶ್ರೀಕೃಷ್ಣಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟು ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯದಲ್ಲಿ ಪ್ರಕಟಿಸಲ್ಪಟ್ಟಿತು.

S. ೦೨೭/O. 967/R. 1113 2000-7-1971

# ಕನ್ನಡ ಲಿಪಿಯ ಪುಸ್ತಕಗಳು

| | | | |
|---|---|---|---|
| ದ್ವಾದಶ ಸ್ತೋತ್ರಾಣಿ | ... | ... | 0.25 |
| ಕೃಷ್ಣಾಮೃತಮಹಾರ್ಣವ, ನಖಸ್ತುತಿ, ಯಮಕಭಾರತ, ಶ್ರೀಕೃಷ್ಣಪದ್ಯಂ (ಕನ್ನಡ ಅನುವಾದ ಸಹಿತ) | | ... | 1.00 |
| ದೇವಪೂಜಾಪದ್ಧತಿ | ... | ... | 0.50 |
| ಋಗ್ವೇದೀಯ ಶ್ರೀಸೂಕ್ತ, ಪುರುಷಸೂಕ್ತ, (ಸ್ವರಸಹಿತ) | ... | ... | 0.20 |
| ಯಜುರ್ವೇದೀಯ " " | ... | ... | 0.15 |
| ತತ್ತ್ವನ್ಯಾಸ ಮಾತೃಕಾನ್ಯಾಸ | ... | ... | 0.15 |
| ರುದ್ರಾಧ್ಯಾಯ-ಚಮಕ-ಲಘುನ್ಯಾಸ (ಸ್ವರಸಹಿತ) | ... | ... | 0.50 |
| ವಾಯುಸ್ತುತಿ (ನಖಸ್ತುತಿ ಸಹಿತ) | ... | ... | 0.30 |
| ನೃಸಿಂಹಸ್ತುತಿ (ನೃಸಿಂಹಕವಚ ಸಹಿತ) | ... | ... | 0.15 |
| ಶಿವಸ್ತುತಿ (ಇಂದ್ರಾಕ್ಷೀಸ್ತೋತ್ರ ಸಹಿತ) | ... | ... | 0.12 |
| ಶಿವಕವಚ " | .... | ... | 0.20 |
| ರಾಮಸ್ತುತಿ, ಶಿವಸ್ತುತಿ (ಮರಾಠಿ) | ... | ... | 0.10 |
| ಪುಂಡರೀಕಾಕ್ಷಸ್ತೋತ್ರ ([illegible]ತಂತೇಸ್ತೋತ್ರ) (ಶತಾಪರಾಧ ಸ್ತೋತ್ರ ಸಹ)... | | | 0.15 |
| ಶ್ರೀಮಧ್ವವಿಜಯ ಮೂಲ | ... | ... | 3.00 |
| ಸುಂದರಕಾಂಡ (ವಾಲ್ಮೀಕಿರಾಮಾಯಣ) ಮೂಲ | ... | ... | 3.50 |
| ಸುಂದರಕಾಂಡಕಥಾಸಂಗ್ರಹ (ತಾ. ನಿ. ೭ನೆಯ ಅಧ್ಯಾಯ) | | ... | 0.20 |
| ವಾದಿರಾಜಸ್ತೋತ್ರ (ಕವಚ, ಅಣುವೃಂದಾವನಾಖ್ಯಾನ ಸಹ) | | ... | 0.25 |
| ರಾಘವೇಂದ್ರಸ್ತೋತ್ರ (ಕವಚ ಸಹಿತ) | ... | ... | 0.20 |
| " (ಕನ್ನಡ ತಾತ್ಪರ್ಯ ಸಹಿತ) | ... | ... | 0.40 |
| ವೇಂಕಟೇಶಸುಪ್ರಭಾತಮ್ | ... | ... | 0.20 |
| ವೇಂಕಟೇಶಸ್ತೋತ್ರ (ಮರಾಠಿ) | ... | ... | 0.20 |
| ಗೋಪೀಗೀತಂ, ಅಚ್ಯುತಾಷ್ಟಕಂ, ಇತ್ಯಾದಿ | ... | ... | 0.10 |
| ನವಗ್ರಹಸ್ತುತಿ (ಅಶ್ವತ್ಥಸ್ತೋತ್ರ, ಶನಿಸ್ತೋತ್ರ ಸಹಿತ) | ... | ... | 0.20 |
| ದಶಾವತಾರಸ್ತುತಿ, ಕೃಷ್ಣಾಷ್ಟಕ | ... | ... | 0.20 |
| ಸ್ತೋತ್ರರತ್ನಮಾಲಾ ಭಾಗ ೭ ಪ್ರಕೀರ್ಣಸ್ತೋತ್ರಗಳು | ... | ... | 0.19 |
| ಭೋಜನಮಂತ್ರಗಳು | ... | ... | 0.30 |
| ಮಾಧವಸ್ತವರಾಜ | ... | ... | 0.07 |
| ಗಣಪತ್ಯಥರ್ವಶೀರ್ಷಂ, ಗಣೇಶಕವಚಂ ಚ | ... | ... | 0.15 |
| ಲಕ್ಷ್ಮೀಹೃದಯ (ನಾರಾಯಣಹೃದಯ-ವರ್ಮ ಸಹ) | ... | ... | 0.50 |
| ರಾಮರಕ್ಷಾಸ್ತೋತ್ರ | ... | ... | 0.10 |

ಪಾವಂಜೆ ಗುರುರಾವ್ ಅಂಡ್ ಸನ್ಸ್

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ ಉಡುಪಿ